ಸಂಪೂರ್ಣ ಸಂಕ ಆಗಿದೆ



# ಅಕ್ಕನ ವಚನಗಳಲ್ಲಿ ಪ್ರತಿಭಟನೆಯ ನೆಲೆಗಳು

ಎಂ.ಫಿಲ್ ಪದವಿಗಾಗಿ
ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ



*ನಿಬಂಧಕಾರರು*
**ಶ್ರೀಮತಿ ಸುಧಾ ಬಿ.ಎಸ್.**
ಎಂ.ಫಿಲ್ ವಿದ್ಯಾರ್ಥಿನಿ, ಕಾವ್ಯ ಮಂಡಲ, ಬೆಂಗಳೂರು.

*ಮಾರ್ಗದರ್ಶಕರು*
**ಶ್ರೀಮತಿ ಎಚ್.ಎಲ್.ಪುಷ್ಪ**, ಉಪನ್ಯಾಸಕರು,
ಸರ್ಕಾರಿ ಪದವಿ ಪೂರ್ವ ಕಾಲೇಜು, ಮುನಿರೆಡ್ಡಿ ಪಾಳ್ಯ, ಬೆಂಗಳೂರು.

*ನಿರ್ದೇಶಕರು*
**ಕಾವ್ಯ ಮಂಡಲ**
(ಹಂಪಿ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ಬೆಂಗಳೂರು.





# ಮಾರ್ಗದರ್ಶಕರ ದೃಢೀಕರಣ ಪತ್ರ

ಅಕ್ಕನ ವಚನಗಳಲ್ಲಿ ಪ್ರತಿಭಟನೆಯ ನೆಲೆಗಳು ಎಂಬ ವಿಷಯವನ್ನು ಕುರಿತಂತೆ ಶ್ರೀಮತಿ ಸುಧಾ ಬಿ.ಎಸ್. ಇವರು ಎಚ್.ಎಲ್.ಪುಷ್ಪ ಆದ ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿ ಪೂರೈಕೆಗಾಗಿ ನಿಬಂಧವನ್ನು ರಚಿಸಿರುತ್ತಾರೆ. ಅವರು ಈ ನಿಬಂಧವನ್ನು ಸ್ವಂತವಾಗಿ ಸಿದ್ಧಗೊಳಿಸಿದ್ದು, ಈ ಪ್ರಬಂಧದ ಯಾವುದೇ ಲೇಖನಗಳು ಎಲ್ಲೂ ಪ್ರಕಟಗೊಂಡಿಲ್ಲ. ಈ ಲೇಖನಗಳನ್ನು ಮೊದಲ ಬಾರಿಗೆ ಎಂ.ಫಿಲ್ ಪದವಿಗಾಗಿ ಬರೆದು ಸಲ್ಲಿಸಿರುತ್ತಾರೆ ಎಂದು ದೃಢೀಕರಿಸುತ್ತೇನೆ.

ಬೆಂಗಳೂರು:

ದಿನಾಂಕ: 10.09.2007

ತಮ್ಮ ವಿಶ್ವಾಸಿ

ಎಚ್. ಎಲ್. ಪುಷ್ಪ
ಕನ್ನಡ ಉಪನ್ಯಾಸಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಮನೋರಾಯನಪಾಳ್ಯ
ಬೆಂಗಳೂರು-32

# ಘೋಷಣಾ ಪತ್ರ

ಶ್ರೀಮತಿ ಸುಧಾ ಬಿ.ಎಸ್ ಆದ ನಾನು ಶ್ರೀಮತಿ ಎಚ್.ಎಲ್.ಪುಷ್ಪ, ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಮುನಿರೆಡ್ಡಿ ಪಾಳ್ಯ, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ **'ಅಕ್ಕನ ವಚನಗಳಲ್ಲಿ ಪ್ರತಿಭಟನೆಯ ನೆಲೆಗಳು'** ಎಂಬ ವಿಷಯವನ್ನು ಕುರಿತು ಎಂ.ಫಿಲ್ ಪದವಿಗಾಗಿ ನಿಬಂಧವನ್ನು ಸಿದ್ಧಗೊಳಿಸಿದ್ದಾರೆ.

ಈ ನಿಬಂಧದ ಆಂಶಿಕ ಭಾಗವನ್ನಾಗಲಿ ಅಥವಾ ಪೂರ್ಣ ಭಾಗವನ್ನಾಗಲಿ ಎಲ್ಲೂ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣಿಸುತ್ತಿದ್ದೇನೆ.

ಬೆಂಗಳೂರು :

ದಿನಾಂಕ:

ಸುಧಾ ಬಿ.ಎಸ್.

**ಸುಧಾ ಬಿ.ಎಸ್.**

# ಪರಿವಿಡಿ

# ಅಕ್ಕನ ವಚನಗಳಲ್ಲಿ ಪ್ರತಿಭಟನೆಯ ನೆಲೆಗಳು

## ಪೀಠಿಕೆ

ಕರ್ನಾಟಕ ಇತಿಹಾಸದಲ್ಲಿ 12ನೇ ಶತಮಾನ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಕ್ಷೇತ್ರಗಳ ಬದಲಾವಣೆಯ ಹಾದಿಯಲ್ಲಿ ದಾಪುಗಾಲಿಟ್ಟ ಕಾಲ. ಅಲ್ಲದೆ ಕಲ್ಯಾಣದಲ್ಲಿ ಬಸವಣ್ಣನ ನೇತೃತ್ವದಲ್ಲಿ ಜಾತಿ, ಮತ, ಧರ್ಮ, ಲಿಂಗ, ವರ್ಗ, ವರ್ಣಗಳ ತಾರತಮ್ಯದ ವಿರುದ್ಧ ತೀಕ್ಷ್ಣ ಪ್ರಮಾಣದ ಹೋರಾಟದ ಅಲೆಗಳು ಪ್ರಾರಂಭವಾದರೆ, ಇನ್ನೊಂದೆಡೆ ಸಾಮಾಜಿಕ ವಾಗಿ ಹಿಂದೆಂದೂ ಕೇಳರಿಯದ ಹೊಸ ಆಲೋಚನೆ, ಹೊಸ ನೋಟ ಅದು ಈ ಯುಗದಲ್ಲಿ ಆರಂಭವಾದದ್ದು ಮತ್ತೊಂದು ಅಂಶ. ಒಂದು ಕಡೆ ಸ್ವತಂತ್ರಾಪೇಕ್ಷೆಯ, ಸಮಾನತೆಯ ಹಂಬಲದ ಹೋರಾಟ ಕಂಡುಬಂದರೆ ಮತ್ತೊಂದು ಹಂತದಲ್ಲಿ ವೈಚಾರಿಕ ಮತ್ತು ಸಾಹಿತ್ಯಿಕ ಕ್ರಾಂತಿ ಪ್ರಾರಂಭವಾಯಿತು. ಕನ್ನಡ ಸಾಹಿತ್ಯಕ್ಕೆ ವಚನ ಸಾಹಿತ್ಯ ನೀಡಿದ ಕೊಡುಗೆಯನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಮನಸ್ಪಂದನ ಭಾಷೆಯಿಂದಾಗಿ ಆಂತರ್ಯದ ತುಮುಲಗಳನ್ನು ವ್ಯಕ್ತಪಡಿಸುವಲ್ಲಿ ಗಮನಾರ್ಹವಾದ ಯಶಸ್ಸನ್ನು ಸಾಧಿಸಿದವರು ವಚನಕಾರರು. ವಚನ ಸಾಹಿತ್ಯವನ್ನು 12ನೇ ಶತಮಾನದಲ್ಲಿ ನಡೆದ ಸಾಮಾಜಿಕ ಕ್ರಾಂತಿಯ ವಿಭಿನ್ನ ಮಾದರಿ ಎನ್ನಬಹುದು. ಏಕೆಂದರೆ ವಚನಗಳಲ್ಲಿ ಆಧ್ಯಾತ್ಮಿಕ ಅಲೌಕಿಕ ಭಾವಕ್ಕಿಂತ ಹೆಚ್ಚಾಗಿ ಸಾಮಾಜಿಕ, ಸಾಂಸ್ಕೃತಿಕ, ಮಾನಸಿಕ ಗೊಂದಲಗಳ ಸಂಘರ್ಷ, ಅದಕ್ಕೆ ಪ್ರತಿಯೊಬ್ಬರೂ ತಮ್ಮದೇ ಆದ ರೀತಿಯಲ್ಲಿ ಪರಿಹಾರ ಕಂಡುಕೊಂಡ ಬಗೆ ಮುಖ್ಯವೆನಿಸುತ್ತದೆ. ಈ ಆವಧಿಯನ್ನು ಅಭಿವ್ಯಕ್ತಿ ಸ್ವಾಂತತ್ರ್ಯದ ತುತ್ತ ತುದಿ ಎಂದರೆ ತಪ್ಪಾಗಲಾರದು. ಇಲ್ಲಿ ಅವಧಿ ಎಂಬ ಶಬ್ದವನ್ನು ಕಾಲಘಟ್ಟ ಎಂಬ ಅರ್ಥಕ್ಕೆ ಬದಲಾಗಿ ಸಾಹಿತ್ಯ ಸಂದರ್ಭ ಎಂದು ನೇಮಕಗೊಳಿಸಲಾಗಿದೆ.

ಹನ್ನೆರಡನೇ ಶತಮಾನ ಹಿಂದೆಂದೂ ಕೇಳರಿಯದ ಸಾಮಾಜಿಕ ಚಳುವಳಿಯ ಕೇಂದ್ರ ಬಿಂದುವಾಗಿತ್ತು. ಎಲ್ಲಿದರಲ್ಲಿಯೂ ಹೊಸತನ, ಹೊಸನೋಟ ಕ್ರಮ, ಹೊಸ ಆಲೋಚನೆ, ವಿಧಾನ ವಚನ ಚಳವಳಿಯಿಂದ ಆರಂಭವಾದ ಕಾರಣ ಹಿಂದಿನಿಂದ ಅಚರಣೆಯಲ್ಲಿದ್ದ ರೂಢಿಗತ ಸಂಪ್ರದಾಯದ ವಿರುದ್ಧ ಹೊಸ ಸಂಘರ್ಷದ ಅಲೆ ತೇಲಿ ಬಂದಿತು. ಬಸವಣ್ಣ ಆರಂಭಿಸಿದ ಸಾಮಾಜಿಕ ಕ್ರಾಂತಿ ಹೊಸ ರೂಪವನ್ನು ಪಡೆದು ಅದು ಸಾಂಸ್ಕೃತಿಕ ಕ್ರಾಂತಿಯಾಗಿ ಮಾರ್ಪಟ್ಟಿತು. ಇದನ್ನು ಸಾಂಸ್ಕೃತಿಕ ಕ್ರಾಂತಿ ಎಂದು ಕರೆಯಲು ಕಾರಣವೇನೆಂದರೆ ಸಮಾಜದಲ್ಲಿ

ಹಿಂದಿನಿಂದ ಅನುಸರಿಸಿಕೊಂಡು ಬಂದಿದ್ದ ಹಲವು ಆಚರಣೆಗಳ ವಿರುದ್ಧ ತೀವ್ರವಾದ ಪ್ರತಿಭಟನೆ ಆರಂಭವಾದದ್ದು ಮತ್ತು ನಂತರದ ಹಂತದಲ್ಲಿ ಇದು ಮಾನವನ ವ್ಯಯಕ್ತಿಕ ಆಸೆ, ಆಲೋಚನೆ, ಭಾವನೆಗಳ ವಲಯವನ್ನು ವ್ಯಾಪಿಸಿ ಸಂಸ್ಕೃತಿ ಎಂದು ಕರೆಯಲ್ಪಡುತ್ತಿದ್ದ ಹಲವು ಆಚರಣೆಗಳು ಹೊಸ ರೂಪವನ್ನು ಪಡೆಯಲು ಕಾರಣವಾಯಿತು.

ಈ ಕಾಲದ ಮತ್ತೊಂದು ಪ್ರಮುಖ ಕೊಡುಗೆ ವಚನ ಸಾಹಿತ್ಯ. ಸಾಹಿತ್ಯ ಜನಸಾಮಾನ್ಯರಿಂದ ಅವರಿಗೆ ಅರ್ಥವಾಗುವ ಭಾಷೆಯಲ್ಲಿ ಅಭಿವೃದ್ದಿಗೊಂಡಿದ್ದು ಈ ಕಾಲದ ವಿಶೇಷ. ಇಲ್ಲಿನ ವಚನಕಾರರು ಸಾಹಿತ್ಯ ರಚನೆಗೆ ಸಿದ್ಧ ಮಾದರಿಯೊಂದನ್ನು ಇಟ್ಟು ಕೊಳ್ಳದೆ ತಮ್ಮ ಮಾನಸಿಕ ಆಲೋಚನೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದರು. ಅದುದರಿಂದಾಗಿ ವ್ಯಯಕ್ತಿಕ ಆಲೋಚನೆ ಅಭಿವ್ಯಕ್ತಿಗೂ ಸಾಮಾಜಿಕ ಆಲೋಚನೆ ಅಭಿವ್ಯಕಿಗೂ ನಡುವಿನ ಅಂತರ ತಿಳಿಯಲು ಸಾಧ್ಯವಾಯಿತು. ವೈಯಕ್ತಿಕತೆ ಮತ್ತು ಸಾಮೂಹಿಕತೆಯ ನಡುವಿನ ದ್ವಂದ್ವ ಎಲ್ಲಾ ವಚನಕಾರರಲ್ಲೂ ಕಂಡು ಬರುತ್ತದೆಯಾದರೂ ಕೆಲವೊಬ್ಬರು ಮಾತ್ರ ಈ ದ್ವಂದ್ವಗಳನ್ನು ಮೀರಿ ತಮ್ಮದೇ ಆದ ದೃಢನಿರ್ಧಾರವೊಂದನ್ನು ರೂಪಿಸಿಕೊಂಡು ಅದನ್ನು ಪ್ರತಿಪಾದಿಸಿ ಯಶಸ್ಸನ್ನು ಗಳಿಸಿದ್ದಾರೆ. ಈ ರೀತಿ ಯಶಸ್ಸನ್ನ ಸಾಧಿಸಿದವರಲ್ಲಿ ಉಡುತಡಿಯ ಮಹಾದೇವಿ ಪ್ರಮುಖಳು. ಬಸವಾದಿ ವಚನಕಾರರು ಆರಂಭಿಸಿದ ಹೋರಾಟದ ಅರಿವಿದ್ದೋ, ಇಲ್ಲದೆಯೋ, ತನ್ನದೇ ಆದ ರೀತಿಯಲ್ಲಿ ತೀರಾ ವೈಯಕ್ತಿಕ ಮಟ್ಟದಲ್ಲಿ ಸ್ತ್ರೀ ಸ್ವಾತಂತ್ರ, ಸಮಾನತೆ, ಮತ್ತು ವಿಚಾರ ಸ್ವಾತಂತ್ರದ ಪರವಾಗಿ ಹೋರಾಟವನ್ನು ಆರಂಭಿಸಿದವಳು ಇವಳು.

ಉಡುತಡಿಯ ನಿರ್ಮಲ ಶೆಟ್ಟಿ, ಸುಮತಿಯರ ಮಗಳಾಗಿ ಹುಟ್ಟಿದ ಮಹಾದೇವಿ ಬಾಲ್ಯದಿಂದಲೂ ಆಧ್ಯಾತ್ಮದ ಬಗೆಗೆ ಒಲವನ್ನು ಹೊಂದಿದ್ದಳೆಂಬ ವಿಚಾರ ಹರಿಹರನ ರಗಳೆ ಹಾಗೂ ಇನ್ನಿತರ ಕೃತಿಗಳಿಂದ ತಿಳಿದು ಬರುತ್ತದೆ. ಅವಳ ಆಧ್ಯಾತ್ಮ ಸಾಧನೆ ಲೌಕಿಕ ಜೀವನದಿಂದ ಬಿಡುಗಡೆಗಾಗಿ ರೂಪುಗೊಂಡ ಪರ್ಯಾಯ ವ್ಯವಸ್ಥೆಯಾಗಿದೆ. ಈ ಹಂಬಲದಲ್ಲಿ ಲೌಕಿಕ ಸಂಬಂಧಗಳ ಬಂಧನದಿಂದ ಮುಕ್ತಿ ಪಡೆಯಬೇಕೆಂದು ಶ್ರೀಶೈಲದ ಮಲ್ಲಿಕಾರ್ಜುನನನ್ನು ತನ್ನ ಪತಿಯನ್ನಾಗಿ ಸ್ವೀಕರಿಸಿದಳು. ಹಲವು ಮೂಲಗಳ ಪ್ರಕಾರ ಅಕ್ಕ ಒತ್ತಡಕ್ಕೆ ಮಣಿದು ಕೌಶಿಕನನ್ನು ವಿವಾಹವಾದ ಸಂಗತಿ ತಿಳಿದು ಬರುತ್ತದೆ. ಆದರೆ ತನ್ನ ಸಾಧನೆಗೆ ಅಡ್ಡ ಬಂದ ಕೌಶಿಕನನ್ನು ನಿರಾಕರಿಸುವುದರ ಮುಖಾಂತರ ಪುರುಷ ಪ್ರಧಾನ ಪ್ರಭುತ್ವದ ವಿರುದ್ಧ ಸಿಡಿದೆದ್ದಳು. ಅಲೌಕಿಕದ ವ್ಯಕ್ತಿಯನ್ನು ಗಂಡನನ್ನಾಗಿ ಸ್ವೀಕರಿಸಿ ಸಾಂಪ್ರದಾಯಿಕ ಮೌಲ್ಯಗಳ ವಿರುದ್ಧ ದನಿ ಎತ್ತುವುದರೊಂದಿಗೆ ಸಮಕಾಲೀನ ಸಾಮಾಜಿಕ ವ್ಯವಸ್ಥೆಯ ಒಳಗೆ ಇದ್ದುಕೊಂಡೇ ಅದರ ವಿರುದ್ಧ ಹೋರಾಟವನ್ನು ಆರಂಭಿಸಿದಳು. ಈ ಹಿನ್ನಲೆಯಲ್ಲಿ ಅವಳ ಜೀವನ ಮತ್ತು ಸಾಧನೆಯ ಅಧ್ಯಯನ ಬಹಳ ಪ್ರಮುಖವಾದದ್ದೆನಿಸುತ್ತಿದೆ.

ಅಕ್ಕನ ಜೀವನವೇ ಒಂದು ಬಗೆಯ ಪ್ರತಿಭಾಟನಾ ನೆಲೆಯುಳ್ಳದ್ದಾಗಿದೆ. ಅದು ಅವಳ ಜೀವನದ ಯಾವುದೋ ಒಂದು ಹಂತದಲ್ಲಿ ಒಂದು ವಿಷಯವನ್ನು ಕುರಿತಂತೆ ರೂಪುಗೊಂಡದ್ದಲ್ಲ. ತನ್ನ ಜೀವನದ ಸಮಗ್ರ ಆಗು ಹೋಗುಗಳನ್ನು ಕುರಿತಂತೆ ಅದರ ವಿರುದ್ಧ ಪ್ರತಿಭಾಟನೆಯನ್ನು ವ್ಯಕ್ತಪಡಿಸುವುದರ ಜೊತೆಯಲ್ಲಿಯೇ ಅದಕ್ಕೊಂದು ಪರ್ಯಾಯ ಮಾರ್ಗವನ್ನು ಕಟ್ಟಿಕೊಂಡಳು. ಸಮಗ್ರ ಸಾಮಾಜಿಕ ಚಿಂತನೆ. ತಾತ್ವಿಕ ಮತ್ತು ವೈಚಾರಿಕ ಮನೋಭಾವ ಅವಳ ಹೋರಾಟದ ಶಕ್ತಿಗೆ ಮತ್ತಷ್ಟು ಚೈತನ್ಯವನ್ನು ತುಂಬಿದವು. ಕಾಲದ ಪ್ರಭಾವವೋ,

ಸಾಮಾಜಿಕ ಒತ್ತಡವೋ, ಎಂಬಂತೆ ಬಹುದೊಡ್ಡ ಸಾಮಾಜಿಕ ಸಮಸ್ಯೆಯೊಂದಕ್ಕೆ ಉತ್ತರವನ್ನು ಹುಡುಕಲು ಪ್ರಯತ್ನಿಸಿದಳು. ಬಸವಾದಿ ಶರಣರ ಒಡನಾಟಕ್ಕೆ ಮುನ್ನ ತನ್ನದೇ ಆದ ರೀತಿಯಲ್ಲಿ ಸ್ವತಂತ್ರ ಹೋರಾಟವನ್ನು ಪ್ರಾರಂಭಿಸಿದಳು. ಅವಳ ಹೋರಾಟದ ಸ್ವರೂಪ ತೀರಾ ವೈಯಕ್ತಿಕ ಎನಿಸಿದರೂ ಒಂದು ಹಂತದಲ್ಲಿ ವೈಯಕ್ತಿಕತೆಯನ್ನು ಮೀರಿ ನಿಲ್ಲುವಷ್ಟು ಪ್ರಭಾವಶಾಲಿಯಾದದ್ದಾಗಿದೆ. ಕೌಶಿಕನ ನಿರಾಕರಣೆಯ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ಅಕ್ಕ ಹೆಣ್ಣಿನ ಆಯ್ಕೆ ಮತ್ತು ಅಭಿವ್ಯಕ್ತಿ ಸ್ವಾತಂತ್ರಕ್ಕೆ ನಾಂದಿ ಹಾಡಿದಳು. ಅಲ್ಲದೆ ಸಾಮಾಜಿಕ ಒಪ್ಪಿತ ಮೌಲ್ಯಗಳಾದ ಕುಟುಂಬ, ಸಮಾಜ, ಸತಿ-ಪತಿ ಭಾವವನ್ನು ವಿರೋಧಿಸುವ ಜೊತೆ ಜೊತೆಯಲ್ಲಿಯೇ ಈ ಪರಿಕಲ್ಪನೆಗಳನ್ನು ಮುರಿದು ಕಟ್ಟುವ ಪ್ರಯತ್ನವನ್ನು ಯಶಸ್ವಿಯಾಗಿ ಮಾಡಿದಳು. ಈ ಹಿನ್ನಲೆಯಲ್ಲಿ ಅಕ್ಕನ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ಅಂಶಗಳು ವಿಭಿನ್ನ ಹಾಗೂ ವಿಶಿಷ್ಟರೀತಿಯದ್ದಾಗಿದೆ. ಅವುಗಳನ್ನು ಒಟ್ಟುಗೂಡಿಸಿ ವಿಶ್ಲೇಷಿಸುವ ಪ್ರಯತ್ನ ಇಲ್ಲಿದೆ.

ಹೆಣ್ಣಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿಲ್ಲ, ಅವಳ ಬದುಕು ಸಂಪೂರ್ಣ ಪಾರಾಧೀನ ಎನ್ನುವ ಸಂದರ್ಭದಲ್ಲಿ ವಚನಕಾರರು ಹೆಣ್ಣಿಗೆ ಆಧ್ಯಾತ್ಮಿಕ ಜೀವನದಲ್ಲಿ ಸಮಪಾಲು ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ನೀಡುವ ಮೂಲಕ ಸ್ತ್ರೀಯರ ಸಾಮಾಜಿಕ ಸಮಾನತೆಗೆ ನಾಂದಿ ಹಾಡಿದರು. ಈ ಕಾಲವನ್ನು ಸಮರ್ಪಕವಾದ ರೀತಿಯಲ್ಲಿ ಬಳಸಿಕೊಂಡ ವಚನಾಕಾರ್ತಿಯರು ಹಾಗೂ ಅಕ್ಕ ತಮ್ಮದೇ ಆದ ರೀತಿಯಲ್ಲಿ ಬದುಕನ್ನು ರೂಪಿಸಿಕೊಳ್ಳಲು ಮುಂದಾದರು. ಸಮಾಜದ ಆಗುಹೋಗುಗಳಿಗೆ ಸೂಕ್ಷ್ಮವಾಗಿ ಸ್ಪಂದಿಸಿದ ಅಕ್ಕ ಪ್ರತಿ ಹಂತದಲ್ಲಿಯೂ ಸಮಾಜಕ್ಕೆ ಮುಖಾಮುಖಿಯಾದ ಬಗೆ ಮಾತ್ರ ಎಲ್ಲರಿಗಿಂತ ವಿಭಿನ್ನವಾದದ್ದು. ತನ್ನ ಜೀವನವನ್ನೇ ಹೋರಾಟಕ್ಕೆ ಮೀಸಲಾಗಿರಿಸಿದ ಅಕ್ಕ ಪ್ರತಿ ಹಂತದಲ್ಲಿಯೂ ಸಮಾಜ ಸಂಸ್ಕೃತಿಯೊಂದಿಗೆ ಪ್ರಭಲ ವಿರೋಧವನ್ನು ಎದುರಿಸಬೇಕಾಯಿತು. ಎಷ್ಟೆಲ್ಲಾ ಸಮಸ್ಯೆಗಳು ಎದುರಾದರೂ ಛಲ ಬಿಡದ ತ್ರಿವಿಕ್ರಮನಂತೆ ಅವಳು ಮುನ್ನಡೆದ ಕ್ರಮ ಇಂದಿಗೂ ಆದರ್ಶ ಪ್ರಾಯವಾದುದ್ದಾಗಿದೆ ಹೆಣ್ಣಿನ ವ್ಯಕ್ತಿತ್ವವೇ ಸಂಪೂರ್ಣ ಅವಗಣೆನೆಗೆ ಒಳಗಾಗಿದ ಸಂದರ್ಭದಲ್ಲಿ ಆಯ್ಕೆ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಅಕ್ಕ ನಡೆಸಿದ ಹೋರಾಟ ಅತ್ಯಂತ ಪ್ರಮುಖವಾದದ್ದು. ಈ ಹಿನ್ನಲೆಯಲ್ಲಿ ಅವಳ ಬದುಕು ಮತ್ತು ಸಾಧನೆ ಇಂದಿಗೂ ಅಧ್ಯಯನ ಯೋಗ್ಯ ಎಂದೆನಿಸುತ್ತಿದೆ.

ಒಟ್ಟಾರೆ ಅಕ್ಕನ ಜೀವನದಲ್ಲಿ ಕಂಡುಬರುವ ವ್ಯಕ್ತಿ ಅವ್ಯಕ್ತ, ಪ್ರತಿಭಟನೆಯ ಸ್ವರೂಪಗಳನ್ನು ಆಧಾರವಾಗಿಟ್ಟುಕೊಂಡು ಈ ನಿಬಂಧ ರಚನೆಯನ್ನು ಮಾಡುವ ಉದ್ದೇಶದಿಂದ ಆಧ್ಯಯನ ಮಾಡಲಾಗುವುದು. ಲಭ್ಯವಿರುವ ವಚನಗಳು, ಶೂನ್ಯಸಂಪಾದನೆ. ಅವಳ ಜೀವನ ಚರಿತ್ರೆಯನ್ನು ಮುಖ್ಯವಾಗಿ ಗಮನದಲ್ಲಿಟ್ಟು ಕೊಳ್ಳಲಾಗಿದೆ. ಜೊತೆಗೆ ಇತರೆ ವಚನಕಾರರ ವಚನಗಳು, ಇತರೆಸಂತ ಮಹಿಳೆಯರ ಜೀವನವನ್ನು ಕುರಿತು ಅಧ್ಯಯನ ಮಾಡಲಾಗುವುದು. ಸಾಧ್ಯವಾದಷ್ಟು ಮಟ್ಟಿಗೆ ವಚನಗಳ ಸಾಮಾಜಿಕ ವ್ಯಾಪ್ತಿಯನ್ನು ವಿಸ್ತರಿಸಿ ನೋಡುವ ಉದ್ದೇಶದಿಂದ ಅಧ್ಯಯನ ಮಾಡಲಾಗುವುದು ಅಲ್ಲದೆ ಜೀವನ ಹಾಗೂ ವಚನಗಳ ಸಮಗ್ರ ಅಧ್ಯಯನ ಪ್ರಮುಖ ಉದ್ದೇಶವಾಗಿದೆ. ಈ ಅಧ್ಯಯನದಲ್ಲಿ **'ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ'** ಪ್ರಕಟಿಸಿರುವ **'ಶಿವಶರಣೆಯರ ವಚನ ಸಂಪುಟ ಭಾಗ 5'**ನ್ನು ಆಧಾರವಾಗಿಟ್ಟುಕೊಂಡು ವಚನಗಳ ಅಧ್ಯಯನ ಮಾಡಲಾಗಿದೆ. ಜೊತೆಗೆ **'ಬಸವರಾಜ ಕಲ್ಗುಡಿಯವರ 'ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ ಗುರುಲಿಂಗ ಕಾಪಸೆಯವರ ಅಕ್ಕಮಹಾದೇವಿ'** ಮುಂತಾದ ಕೃತಿಗಳನ್ನು ಪ್ರಮುಖವಾಗಿ ಅಧ್ಯಯನ ಮಾಡಲಾಗಿದೆ.

## ಉದ್ದೇಶ ಮತ್ತು ವ್ಯಾಪ್ತಿ

ಅಕ್ಕನ ವಚನಗಳ ಸಾಂಪ್ರದಾಯಿಕ ವ್ಯಾಖ್ಯಾನವನ್ನು ಗಮನಿಸಿದ್ದು ಅವಳ ವಚನಗಳ ಅಧ್ಯಯನಕ್ಕೆ ಹೊರಟಾಗ ಪ್ರಮುಖವಾಗಿ ಈ ಕೆಳ ಸಮಸ್ಯೆಗಳು ಎದುರಾದವು. ಮೊದಲನೆಯದಾಗಿ ಅಕ್ಕನಲ್ಲಿ ಹೋರಾಟದ ಮನೋಭಾವ ಬಾಲ್ಯದಿಂದಲೇ ತಾಯಿ, ತಂದೆಯರ ಪರಿಸರದ ಪ್ರಭಾವದಿಂದ ಬಂದದ್ದೇ? ಅಥವಾ ತಾನು ಜೀವನದಲ್ಲಿ ಎದುರಿಸಿದ ಸಮಸ್ಯೆಗಳಿಗೆ ಪರಿಹಾರವಾಗಿ ಮೂಡಿದೆ ಎಂಬುದು. ಎರಡನೆಯದಾಗಿ ಚೆನ್ನಮಲ್ಲಿಕಾರ್ಜುನ, ಕೌಶಿಕ ಮುಂತಾದ ಪಾತ್ರಗಳು ಕೇವಲ ವ್ಯಕ್ತಿಗತ ಪಾತ್ರಗಳೇ ಅಥವಾ ಶಕ್ತಿಯುತ ರೂಪಕಾತ್ಮಕ ಪಾತ್ರಗಳೇ ಎಂಬ ಪ್ರಶ್ನೆ ಪ್ರಮುಖವಾಗಿ ಕಾಡತೊಡಗಿತು. ಈ ಎಲ್ಲಕ್ಕಿಂತ ಮುಖ್ಯವಾಗಿ ಅಕ್ಕನ ಮನೋಸಾಮರ್ಥ್ಯ, ಧೃಢನಿರ್ಧಾರ, ಸ್ವತಂತ್ರಾಪೇಕ್ಷೆ, ವೈಚಾರಿಕ ಮನೋಭಾವ ಈ ಎಲ್ಲಕ್ಕೂ ಪ್ರೇರಕ ಹಾಗೂ ಪೂರಕವಾದ ಅಂಶಗಳು ಯಾವುವು? ಎಂಬುದನ್ನು ತಿಳಿಯುವ ಕುತೂಹಲ ಇಲ್ಲಿದೆ. ಈ ಹಿನ್ನೆಲೆಯಲ್ಲಿ ಅಕ್ಕನ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ನೆಲೆಗಳನ್ನು ಹುಡುಕುವ ಪ್ರಯತ್ನವನ್ನು ಇಲ್ಲಿನ ಅಧ್ಯಯನದಲ್ಲಿ ಮಾಡಲಾಗಿದೆ.

ಅಕ್ಕ 12ನೇ ಶತಮಾನದ ಪ್ರಮುಖ ಕವಯತ್ರಿ ಮಾತ್ರವಲ್ಲದ ಕನ್ನಡದ ಪ್ರಪ್ರಥಮ ಮಹಿಳಾ ಬಂಡಾಯಗಾರ್ತಿ ಕೂಡ. ಅವಳ ಜೀವನವೇ ಒಂದು ಬಗೆಯ ಸ್ತ್ರೀ ಸ್ವಾತಂತ್ರ್ಯದ, ಹೋರಾಟದ ಮಾದರಿಯದ್ದಾಗಿದೆ. ಈ ಹಿನ್ನಲೆಯಲ್ಲಿ ಅವಳ ವಚನಗಳು ಅತ್ಯಂತ ಪ್ರಮುಖವಾದ ದಾಖಲೆಗಳೆನಿಸುತ್ತಿವೆ. **ಮಹಾದೇವಿಯಕ್ಕನ ರಗಳೆ, ಪ್ರಭುಲಿಂಗ ಲೀಲೆ, ಮಹಾದೇವಿಯಕ್ಕನ ಪುರಾಣ** ಹಾಗೂ ಅಕ್ಕನ ಬಗೆಗಿನ ಇತ್ತೀಚಿನ ಕಾದಂಬರಿಗಳು ಅವಳ ಜೀವನದ ಆಗು ಹೋಗುಗಳನ್ನು ಕುರಿತಂತೆ ಕೆಲವು ಮಾಹಿತಿಗಳನ್ನು ನೀಡುತ್ತವಾದರೂ, ಆಧ್ಯಾತ್ಮದ ಲೇಪನ ಹೆಚ್ಚಾಗಿರುವುದರಿಂದ ವಾಸ್ತವಕ್ಕಿಂತ ಕಾಲ್ಪನಿಕತೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿವೆ. ಆದುದರಿಂದ ಈ ಕೃತಿಗಳನ್ನು ಕೇವಲ ಮಾಹಿತಿಗಾಗಿ ಮಾತ್ರ ಬಳಸಿ ವಚನಗಳ ಅಧ್ಯಯನಕ್ಕೆ ಹೆಚ್ಚು ಪಾಮುಖ್ಯತೆಯನ್ನು ನೀಡಿ ವಚನಗಳಲ್ಲಿ ಕಂಡು ಬರುವ ವ್ಯಕ್ತ ಅವ್ಯಕ್ತ ಪ್ರತಿಭಟನೆಯ ಮಾದರಿಗಳನ್ನ ಅಧ್ಯಯನ ಮಾಡಲಾಗಿದೆ.

12ನೇ ಶತಮಾನ ವೀರಶೈವ ಚಳುವಳಿಯ ಕಾಲವೆಂದು ಗುರುತಿಸಲ್ಪಟ್ಟಿರುವುದರಿಂದ ವಚನಕಾರರನ್ನು ಮತ್ತು ಅವರ ವಚನಗಳನ್ನು ಧಾರ್ಮಿಕ ವ್ಯಾಪ್ತಿಗೆ ಮಾತ್ರ ಒಳಪಡಿಸಿ ನೋಡಲಾಗಿದೆ. ಇದರಿಂದಾಗಿ ವಚನಗಳ ಅರ್ಥ ಸಂಕುಚಿತಗೊಂಡಿತು. ಈ ಮಿತಿಯಲ್ಲಿ ವಚನಗಳು ತನ್ನ ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನದ ಪ್ರಾಮುಖ್ಯತೆಯನ್ನು ಕಳೆದು ಕೊಂಡಿತು. ಈ ಮಿತಿಯನ್ನು ಗಮನದಲ್ಲಿರಿಸಿಕೊಂಡೇ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇಲ್ಲಿ ವಚನಗಳನ್ನು ಸಾಮಾಜಿಕ ವ್ಯಾಪ್ತಿಗೆ ಒಳಪಡಿಸಿ ನೋಡಿದೆಯಾದರೂ ಅದು ಸಾಕಷ್ಟು ಪ್ರಮಾಣದಲ್ಲಿ ಯಶಸ್ವಿಯಾಗಿಲ್ಲ ಎಂದೆನಿಸುತ್ತದೆ.

ಅಕ್ಕನ ಜೀವನ ಹಾಗೂ ಸಾಧನೆಯನ್ನು ಆಧ್ಯಾತ್ಮದ ಪರಿದಿಗೆ ಒಳಪಡಿಸಿದುದರಿಂದ ಅವಳ ಹೋರಾಟದ ಮಾದರಿ ಕೇವಲ ಧಾರ್ಮಿಕ ಮನೋಭಾವನೆಯಿಂದ ಕೂಡಿದ್ದು ಎಂದು ನಂಬಲಾಗಿದೆ. ಆದರೆ

ಸಾಂಪ್ರದಾಯಿಕ ನಂಬಿಕೆಗಿಂತ ಭಿನ್ನವಾದ ರೀತಿಯಲ್ಲಿ ಅವಳ ಜೀವನವನ್ನು ನೋಬಹುದು. ಏಕೆಂದರೆ ಸ್ತ್ರೀಗೆ ಯಾವುದೇ ರೀತಿಯ ಸ್ವಾತಂತ್ರವಿಲ್ಲ ಎನ್ನುವ ಸಂದರ್ಭದಲ್ಲಿಯೂ ಕೂಡ ಅಕ್ಕ ಸಂಸಾರ, ಗಂಡ, ಮದುವೆ, ಮುಂತಾದ ಸಾಮಾಜಿಕ ಸಂಬಂಧಗಳಿಗೆ ಸಂಬಂಧಿಸಿದಂತೆ ಆಯ್ಕೆ ಸ್ವತಂತ್ರವನ್ನು ಹೊಂದಿದ್ದಳು. ಅಲ್ಲದೆ ಎಲ್ಲರು ಬದುಕುವ ರೀತಿಗಿಂತ ಭಿನ್ನವಾಗಿ ಬದುಕುವುದರ ಮುಖಾಂತರ ಸ್ವಂತಿಕೆಯನ್ನು ಮೆರದಳು ಆದುದರಿಂದ ಅಕ್ಕನ ಹೋರಾಟ ಕೇವಲ ಆಧ್ಯಾತ್ಮಿಕಕ್ಕಾಗಲೀ ವೈಯಕ್ತಿಕಕ್ಕಾಗಲೀ ಸೀಮಿತವಾಗಿರದೆ ಅದು ಸ್ತ್ರೀ ಸ್ವಾತಂತ್ರ ಹಾಗೂ ಸಮಾನತೆಯ ಹಂಬಲದ ಪ್ರಪ್ರಥಮ ಹೆಜ್ಜೆ ಎನಿಸುತ್ತದೆ. ಕೇವಲ ಆಧ್ಯಾತ್ಮ ಸಾಧನೆಯೇ ಅವಳ ಮುಖ್ಯಗುರಿಯಾಗಿದ್ದರೆ. ಶರಣ ತತ್ವಕ್ಕೆ ಬದ್ದವಾಗಿ ಸಂಸಾರದಲ್ಲಿದ್ದುಕೊಂಡೇ ಸತಿ-ಪತಿ ಗಳೊಂದಾದ ಭಕ್ತಿ ಹಿತವಪ್ಪದು ಶಿವಂಗೆ ಎಂಬ ಸಿದ್ದಾಂತದ ಅನುಸಾರ ಬದುಕುಬಹುದಿತ್ತು, ಆದರೆ ಅಕ್ಕನಿಗೆ ಈ ಸಂಸಾರ ಸಂಬಂಧಗಳನ್ನು ಮೀರಿ ಬದುಕುವ ಜೀವನದ ಅವಶ್ಯಕತೆ ಇತ್ತು. ಅದುದರಿಂದ ಅವಳು ಲೌಕಿಕದ ಎಲ್ಲ ಸಂಬಂಧಗಳ ಬಂಧನವನ್ನು ಕಳಚಿ ಆಧ್ಯಾತ್ಮಸಾಧನೆಯನ್ನು ತನ್ನ ಹೋರಾಟದ ಮಾರ್ಗವಾಗಿ ಆಯ್ಕೆ ಮಾಡಿಕೊಂಡಳೆನಿಸುತ್ತಿದೆ.ಏಕೆಂದರೆ ಅಂದಿನ ಸಮಾಜದಲ್ಲಿ ಹೆಣ್ಣಿಗೆ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯವಿದದ್ದು ಇಲ್ಲಿಯೇ ಅದಕ್ಕಾಗಿಯೇ ಅಕ್ಕ ತನ್ನ ಹೋರಾಟವನ್ನು ಆಧ್ಯಾತ್ಮಸಾಧನೆಯಿಂದ ಆರಂಭಿಸಿ ಸಾಮಾಜಿಕ ಸಮಾನತೆ ಮತ್ತು ಸ್ವಾತಂತ್ರ್ಯದ ಹಂತಕ್ಕೆ ಕೊಂಡೊಯ್ದಳು. ಈ ನಿಟ್ಟಿನಲ್ಲಿ ಅಕ್ಕ ಸಾಮಾಜಿಕ ಸಂಬಂಧಗಳೆಲ್ಲವನ್ನು ಕಳಚಿ ದಿಗಂಬರೆಯಾಗಿ ಹೊರಟಳು.

ಅಕ್ಕ ಚೆನ್ನಮಲ್ಲಿಕಾರ್ಜುನನನ್ನು ತನ್ನ ಗಂಡನನ್ನಾಗಿ ಒಪ್ಪಿಕೊಳ್ಳುವುದರ ಜೊತೆಜೊತೆಯಲ್ಲಿಯೇ ಸಮಾಜದ ಒಪ್ಪಿತಗಂಡನಾದ ಕೌಶಿಕನನ್ನು, ಅವನ ಪ್ರಭುತ್ವವನ್ನೂ ಧಿಕ್ಕರಿಸಿದಳು. ಅಲ್ಲದೆ ಗಂಡನ ಪ್ರಭುತ್ವ ಹಾಗೂ ಅಧಿಕಾರ ಶಾಹಿ ಪ್ರಭುತ್ವ ಎರಡನ್ನು ನಿರಾಕರಿಸುವುದರ ಮೂಲಕ ತನ್ನ ಜೀವನವನ್ನು ತಾನೆ ಕಟ್ಟಿಕೊಳ್ಳುವ ಸಾಮರ್ಥ್ಯವನ್ನು ತೋರುತ್ತಾಳೆ. ಅವಳ ಈ ಬಯಕೆ ಎಷ್ಟರ ಮಟ್ಟಿಗೆ ಈಡೇರಿತು ಹಾಗೂ ತನ್ನ ಗುರಿ ಮುಟ್ಟಲು ಅವಳು ಎದುರಿಸಿದ ಸಮಸ್ಯೆಗಳು. ಯಾವ ಸ್ವರೂಪದ್ದು ಎಂಬುದು ಕೂಡ ಈ ಅಧ್ಯಯನದ ದೃಷ್ಟಿಯಿಂದ ಬಹಳ ಪ್ರಮುಖವಾದದ್ದು. ತನ್ನ ಹೋರಾಟಕ್ಕೆ ಇಡೀ ಬದುಕನ್ನೇ ಸಮರ್ಪಿಸಿ ಕೊಳ್ಳುವುದರ ಮೂಲಕ ಲೌಕಿಕದ ಎಲ್ಲಾ ಆಸೆ, ಆಕಾಂಕ್ಷೆಗಳನ್ನು ತ್ಯಜಿಸಿದ ಅಕ್ಕ ಚನ್ನಮಲ್ಲಿಕಾರ್ಜುನನ ರೂಪಕದ ಮೂಲಕ ಅದನ್ನು ವ್ಯಕ್ತಪಡಿಸುತ್ತಾಳೆ. ಅವಳ ಈ ಧೈರ್ಯ ಮತ್ತು ಸಾಧನೆ ಎಲ್ಲಾ ಕಾಲಕ್ಕೂ ಎಲ್ಲಾ ಸ್ತ್ರೀಯರಿಗೂ ಮಾದರಿಗಳಾಗಿವೆ.

ಮತ್ತೊಂದು ಹಂತದಲ್ಲಿ ಅಕ್ಕ ತನ್ನ ಗುರಿ ಸಾಧನೆಗಾಗಿ ಸಂಸಾರ, ಸಂಸ್ಕೃತಿ ಸಂಬಂಧಗಳ ಬಂಧನವನ್ನು ಕಡಿದು ಏಕಾಂಗಿಯಾಗಿ ಹೊರಡುತ್ತಾಳೆ. ಈ ಸಂದರ್ಭದಲ್ಲಿ ಅವಳು ಹೋಗುವ ಮಾರ್ಗ ಮತ್ತು ವಿಧಾನ ಎರಡೂ ಕೂಡ ವಿಶಿಷ್ಟವಾದದ್ದು. ಇದು ಸೀತೆ ಸಾವಿತ್ರಿಯ ರಂತಹ ಆದರ್ಶೀಕೃತ ಸ್ತ್ರೀಯರ ಪತಿಭಕ್ತಿ ಕಲ್ಪನೆಯನ್ನು ಸಾಮಾಜಿಕ ಮೌಲ್ಯ ವ್ಯವಸ್ಥೆಯನ್ನೂ ತೀವ್ರವಾಗಿ ತಿರಸ್ಕರಿಸುವ ಸ್ವರೂಪದ್ದಾಗಿದೆ. ಈ ಸಂದರ್ಭದಲ್ಲಿ ಅವಳು ತೆಗೆದುಕೊಳ್ಳುವ ನಿರ್ಧಾರ ಹಾಗೂ ತೋರುವ ಧೈರ್ಯ ಮಹತ್ವದ ಸಂಗತಿ. ಅಕ್ಕ ಪ್ರಚಲಿತ ಸಂಸ್ಕೃತಿಯ ಪ್ರತಿ ವಿಷಯವನ್ನು ಕುರಿತಂತೆ ತನ್ನದೇ ಆದ ರೀತಿಯಲ್ಲಿ ಚರ್ಚಿಸುತ್ತ ಅದರ ಪ್ರಸ್ತುತತೆಯನ್ನು ನಿರಾಕರಿಸುತ್ತಾಳೆ. ಈ ಹಿನ್ನಲೆಯಲ್ಲಿ ಅವಳ ಜೀವನ ಮತ್ತು ಸಾಧನೆಯ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಅಕ್ಕನ ಸಾಧನೆಯ ಹಾದಿಯ ಮತ್ತೊಂದು ವಿಶೇಷತೆ ಎಂದರೆ ಅವಳ ವಸ್ತ್ರನಿರಾಕರಣ ಕ್ರಮ. ಪ್ರಭುತ್ವ ಹಾಗೂ ಸಮಾಜದ ವಿರುದ್ಧ ಪ್ರತಿಭಟನೆಯನ್ನು ಸಾರಿದ ಅಕ್ಕ ಕಡೆಯಲ್ಲಿ ಲೋಕದ ಸಿದ್ಧಾಂತಗಳ ಒತ್ತಡ, ನಿಯಂತ್ರಣಗಳ ಬಿಡುಗಡೆಗಾಗಿ ದಿಗಂಬರೆಯಾಗಿ ಹೊರಡುತ್ತಾಳೆ. ಅವಳ ಈ ಕ್ರಮ ಸಮಾಜ ಸಂಸ್ಕೃತಿಯ ವಿರುದ್ಧ ಅವಳು ಸಾರಿದ ತೀವ್ರ ಪ್ರತಿಭಟನೆಯ ಸ್ವರೂಪವನ್ನು ತಿಳಿಯಲು ಸಹಾಯಕವಾಗಿದೆ.

ಅಕ್ಕನ ಸಾಧನೆಯ ಮತ್ತೊಂದು ಹಾದಿ ಕ್ರಮಿಸಿದ್ದು ಸಾಹಿತ್ಯ ರಚನೆಯ ಮೂಲಕ. ಅಕ್ಕ ಅತ್ಯದ್ಭುತ ಉಪಮ, ರೂಪಕಗಳಿಂದ ಕೂಡಿದ ವಚನಗಳನ್ನಷ್ಟೇ ಅಲ್ಲದೆ ತತ್ವಪದಗಳು ಮತ್ತು ಯೊಗಾಂಗ ತ್ರಿವಿದಿಯನ್ನು ರಚಿಸುವುದರ ಮೂಲಕ ಸಾಹಿತ್ಯ ಸಾಧನೆಯಲ್ಲಿ ತನ್ನ ಸಾಮರ್ಥ್ಯವನ್ನು ತೋರಿದ್ದಾಳೆ. ಭಾವಗೀತಾತ್ಮಕತೆ ಹಾಗೂ ಆಧುನಿಕ ಪ್ರೇಮಗಿತೆಯ ಮಾದರಿಯನ್ನೊಳಗೊಂಡಿರುವ ವಚನಗಳು ಇವಳ ಜೀವನ ಮತ್ತು ಸಾಧನೆಯ ಹಲವು ಅಂಶಗಳನ್ನು ಬಿಚ್ಚಿಡುವ ಪ್ರಮುಖ ಸಾಧನಗಳಾಗಿವೆ. ಅಕ್ಕ ತನ್ನ ಜೀವನದಲ್ಲಿ ವ್ಯಕ್ತಪಡಿಸಿದ ಪ್ರತಭಟನೆಯ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಯಲು ಇರುವ ಪ್ರಮುಖ ಆಧಾರ ಈ ವಚನಗಳು ಆದುದರಿಂದ ಈ ನಿಬಂಧ ರಚನೆಯಲ್ಲಿ ವಚನಗಳ ಅಧ್ಯಯನಕ್ಕೆ ಹೆಚ್ಚಿನ ಪ್ರಾಮುಖತೆಯನ್ನು ನೀಡಲಾಗಿದೆ.

ಒಟ್ಟಾರೆ ಈ ಎಲ್ಲಾ ಅಂಶಗಳ ಆಧಾರದಿಂದ ಅಕ್ಕನ ಜೀವನ ಸ್ತ್ರೀ ಸ್ವಾತಂತ್ರ ಮತ್ತು ಸಮಾನತೆಯ ಹೋರಾಟಕ್ಕೆ ಮಾದರಿಯಾದ ಬಗೆಯನ್ನ ಚರ್ಚೆಗೆ ಒಳಪಡಿಸುವ ಉದ್ದೇಶ ಮಾತ್ರವಲ್ಲದೆ ಅಕ್ಕ ಸಮಾಜ, ಸಂಸ್ಕೃತಿಯ ವಿರುದ್ಧ ತನ್ನ ಪ್ರತಿಭಟನೆಯನ್ನ ವ್ಯಕ್ತಪಡಿಸಲು ಆರಿಸಿಕೊಂಡ ಮಾರ್ಗ. ನಡೆದ ಬಗೆಯನ್ನು ಅಧ್ಯಯನ ಮಾಡಲಾಗಿದೆ ಜೊತೆಗೆ ವಚನಗಳಲ್ಲಿ ವ್ಯಕ್ತವಾಗಿರುವ ಪ್ರತಿಭಟನೆಯ ವಿವಿಧ ರೂಪಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಹಿನ್ನಲೆಯಲ್ಲಿ ಅವಳ ಸಂಸಾರ ನಿರಾಕರಣೆ. ಗಂಡನ ನಿರಾಕರಣೆ. ಸಿದ್ಧ ಮಾದರಿಗಳ ನಿರಾಕರಣೆಯ ಸ್ವರೂಪದ ವಿಸ್ತುತ್ರ ಅಧ್ಯಯನ ಈ ನಿಬಂಧ ರಚನೆಯ ಪ್ರಮುಖ ಉದ್ದೇಶವಾಗಿದೆ.

ಅಕ್ಕನ ವಚನಗಳಲ್ಲಿ ವ್ಯಕ್ತವಾಗಿರುವ ಪ್ರತಿಭಟನೆಯ ನೆಲೆಗಳನ್ನು ಹುಡುಕುವುದರ ಜೊತೆ ಜೊತೆಯಲ್ಲಿಯೇ ಸಮಕಾಲೀನ ವಚನಕಾರ್ತಿಯರ ವಚನಗಳಲ್ಲಿ ವ್ಯಕ್ತವಾಗಿರುವ ಪ್ರತಿಭಟನೆಯ ಅಂಶಗಳನ್ನು ಸಮಗ್ರವಾಗಿಯಲ್ಲದಿದ್ದರೂ ಅಲ್ಪ ಪ್ರಮಾಣದಲ್ಲಿ ಅಧ್ಯಯನ ಮಾಡುವ ಉದ್ದೇಶದಿಂದ ವಿಶ್ವದ ವಿವಿಧ ಭಾಗಗಳಲ್ಲಿ ಕಂಡುಬರುವ ಸಂತಮಹಿಳೆಯರು ಆಧ್ಯಾತ್ಮ ಸಾಧನೆಯ ಮೂಲಕ ಯಾವ ರೀತಿ ಸಮಾಜ ಮತ್ತು ಸಂಸ್ಕೃತಿಯ ವಿರುದ್ಧ ಪ್ರತಿಭಟನೆಯನ್ನು ಸಾರಿದರು ಎಂಬ ಅಂಶವನ್ನು ಅಧ್ಯಯನ ಮಾಡಲಾಗಿದೆ ಮತ್ತು ಅವರ ಜೀವನ ಚರಿತ್ರೆಯ ಅಧ್ಯಯನಕ್ಕೆ ಅಲ್ಪ ಪ್ರಮಾಣದ ಪ್ರಾಮುಖ್ಯತೆಯನ್ನು ನೀಡಲಾಗಿದೆ.

ಅಕ್ಕ ಸಮಾಜಕ್ಕೆ ಎದುರಾದ ಬಗೆಯನ್ನು ಸಮಕಾಲೀನ ವಚನಕಾರರು ಯಾವ ರೀತಿ ಸ್ವೀಕರಿಸಿದರು ಎಂಬುದು ವಿಸ್ಮಯದ ಸಂಗತಿ. ಅಲ್ಲದೆ ಅಕ್ಕ ತನ್ನ ಗುರಿ ಸಾಧನೆಗಾಗಿ ವಚನಕಾರರನ್ನು ಯಾವ ರೀತಿ ಮುಖಾಮುಖಿಯಾದಳು ಎಂಬುದನ್ನ ತಿಳಿಯುವ ಉದ್ದೇಶದಿಂದ ಅಕ್ಕ ಬಸವಣ್ಣ ಅಲ್ಲಮರಂತಹ ವಚನಗಾರರೊಂದಿಗೆ ಇರಿಸಿಕೊಂಡಿದ್ದ ಸಂಬಂಧದ ಸ್ವರೂಪವನ್ನು ಅಧ್ಯಯನ ಮಾಡಲಾಗುವುದು. ಜೊತೆಗೆ ಆಧುನಿಕ ಕವಿತೆಗಳಲ್ಲಿ ಚಿತ್ರಿತವಾಗಿರುವ ಅಕ್ಕನ ವ್ಯಕ್ತಿತ್ವದ ಅಧ್ಯಯನಕ್ಕೆ ಸ್ವಲ್ಪ ಗಮನ ಹರಿಸುವ ಉದ್ದೇಶ ಇಲ್ಲಿದೆ.

ಆದುದರಿಂದ ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅಕ್ಕನ ಜೀವನ ಚರಿತ್ರೆಗೆ ಸಂಬಂಧಿಸಿದಂತೆ ಹರಿಹರನ ರಗಳೆ, ಪ್ರಭುಲಿಂಗ ಲೀಲೆ, ಮಹಾದೇವಿಯಕ್ಕನ ಪುರಾಣ ಕೃತಿಗಳನ್ನಲ್ಲದೆ ಅಕ್ಕನ ಬಗೆಗಿನ ಆಧುನಿಕ ಕಾದಂಬರಿಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗುವುದು.

ಕಾವ್ಯ ಸೌಂದರ್ಯ ಹಾಗೂ ಜೀವನದ ಮೌಲ್ಯಗಳನ್ನು ಪ್ರಧಾನವಾಗುಳ್ಳ ಅಕ್ಕನ ವಚನಗಳಲ್ಲಿ ಪ್ರತಿಭಟನೆಯ ಅಂಶಗಳನ್ನು ಗುರುತಿಸುವುದು ಸ್ವಲ್ಪ ಕಷ್ಟದ ಕೆಲಸ. ಅಲ್ಲದೆ ಪ್ರತಿಭಾವನಾತ್ಮಕ ಅಂಶಗಳು ಅವಳ ಎಲ್ಲಾ ವಚನಗಳಲ್ಲೂ ಕಂಡು ಬರುವುದಿಲ್ಲ. ಕೆಲವು ವಚನಗಳಲ್ಲಿ ಅದು ಸ್ಪಷ್ಟವಾಗಿ ವ್ಯಕ್ತವಾದರೆ ಕೆಲವು ವಚನಗಳಲ್ಲಿ ಅಸ್ಪಷ್ಟವಾಗಿ ಕಂಡುಬರುತ್ತದೆ. ಅವಳು ಸಮಾಜ ವ್ಯವಸ್ಥೆಯ ವಿರುದ್ಧ ಮಾಡಿದ ಪ್ರತಿಭಟನೆಯ ಮಾದರಿ ಕೂಡ ವಿಶಿಷ್ಟವಾದದ್ದು. ಸಂಸಾರ, ಗಂಡ, ಮದುವೆಯಂತಹ, ವಿಷಯಗಳಲ್ಲಿ ಪ್ರತಿಭಟನೆ ಸ್ಪಷ್ಟವಾಗಿ ವ್ಯಕ್ತವಾದರೆ ಸ್ತ್ರೀ ಸ್ವಾತಂತ್ರ, ಸಮಾನತೆ ಅಭಿವ್ಯಕ್ತಿ ಸ್ವಾತಂತ್ರ್ಯದಂತಹ ವಿಷಯಗಳಲ್ಲಿ ಅವ್ಯಕ್ತ ಪ್ರತಿಭಟನೆಯ ಮಾದರಿಗಳನ್ನು ಗುರುತಿಸಬಹುದು. ಇಲ್ಲಿ ಪ್ರತಿಭಟನೆಯ ಅರ್ಥವನ್ನು ನೇರವಾಗಿ ತಿರಸ್ಕರಿಸುವುದು, ಹೋರಾಟಕ್ಕೆ ಮುಂದಾಗುವುದು ಎಂಬ ಅರ್ಥಕ್ಕೆ ಸೀಮಿತಗೊಳಿಸಬೇಕಿಲ್ಲ. ಬದಲಾಗಿ ನಿರಾಕರಣೆ, ಮುರಿದು ಕಟ್ಟುವ ಪ್ರಕ್ರಿಯೆ, ಪರ್ಯಾಯ ಮಾರ್ಗ ಕಂಡುಕೊಳ್ಳುವಿಕೆಯನ್ನು ಕೂಡ ಪ್ರತಿಭಟನೆಯ ವಿಭಿನ್ನ ಮಾದರಿಗಳೆಂದು ಗುರುತಿಸಬಹುದು. ಒಟ್ಟಾರೆ ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅಕ್ಕನ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ಮಾದರಿಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಅಕ್ಕನ ಜೀವನ ಮತ್ತು ಸಾಧನೆ ಸಮಕಾಲಿನ ವಚನಕಾರ್ತಿಯರು ಹಾಗೂ ಇತರೆ ಸಂತ ಮಹಿಳೆಯರಿಗಿಂತ ಯಾವ ರೀತಿ ಭಿನ್ನ ಹಾಗೂ ವಿಶೇಷ ಅಂಶಗಳು ಒಳಗೊಂಡಿದೆ ಎಂಬುದನ್ನು ಈ ನಿಬಂಧದಲ್ಲಿ ಚರ್ಚಿಸುವ ಉದ್ದೇಶದಿಂದ ಅವರ ಜೀವನ ಚರಿತ್ರೆಯ ಅಧ್ಯಯನಕ್ಕೂ ಕೂಡ ಸ್ವಲ್ಪ ಮಟ್ಟಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಅಕ್ಕ ವಚನಕಾರರಿಗೆ ಮುಖಾ ಮುಖಿಯಾದ ಸಂದರ್ಭವನ್ನು ಬಸವಣ್ಣ, ಪ್ರಭು, ಕಿನ್ನರಿಬೊಮ್ಮಯ್ಯರ ನಡುವಿನ ಸಂವಾದದ ಹಿನ್ನಲೆಯಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಒಟ್ಟಾರೆ ಅಕ್ಕನ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಅವಳ ಜೀವನ ಮತ್ತು ಸಾಧನೆಯ ಸಮಗ್ರ ಅಧ್ಯಯನಕ್ಕೆ ಮಹತ್ವಕೊಡಲಾಗಿದೆ. ಜೊತೆಗೆ ಸ್ತ್ರೀ ಸ್ವಾತಂತ್ರ್ಯ ಮತ್ತು ಸಮಾನತೆಯ ಅಧ್ಯಯನದ ದೃಷ್ಟಿಯಿಂದ ವಚನಕಾರ್ತಿಯರು ಹಾಗೂ ಸಂತಮಹಿಳೆಯರಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ಅಂಶಗಳನ್ನು ಈ ನಿಬಂಧದ ವ್ಯಾಪ್ತಿಗೆ ತರಲಾಗಿದೆ.

# ೨

# ವಚನ ಸಾಹಿತ್ಯದಲ್ಲಿ ಪ್ರತಿಭಟನೆಯ ಕಲ್ಪನೆಗಳು

(ವರ್ಗ, ವರ್ಣ, ಲಿಂಗ ಸಂಬಂಧಿ ಪ್ರತಿಭಟನೆಗಳು)

ಸಾಹಿತ್ಯದಲ್ಲಿ ಪ್ರತಿಭಟನೆ ಇಂದು ನಿನ್ನೆಯದಲ್ಲ, ಹಿಂದಿನಿಂದಲೂ ಸಾಹಿತ್ಯ ಸಮಾಜ, ಸಂಸ್ಕೃತಿಯ ಲೋಪ ದೋಷಗಳಿಗೆ ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾ ಬಂದಿದೆ. ಪಂಪನಿಂದ ಹಿಡಿದು ಹರಿಹರ, ರಾಘವಾಂಕ ಮುಂತಾದವರ ಕಾವ್ಯಗಳಲ್ಲಿ ಜಾತಿ, ವರ್ಗ, ವರ್ಣ ತಾರತಮ್ಯದ ವಿರುದ್ಧದ ಪ್ರತಿಭಟನೆಯ ಅಂಶಗಳನ್ನು ಗುರುತಿಸಬಹುದಾಗಿದೆ. ಆದರೆ ಸಮಾಜದ ಸಂಸ್ಕೃತಿಯನ್ನು ಕೇಂದ್ರವಾಗಿರಿಸಿಕೊಂಡು ಅದರೊಳಗಿನ ಆಚರಣೆಗಳಿಗೆ ಸಾಹಿತ್ಯದ ಮೂಲಕ ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತಾ ಬಂದವರು ವಚನಕಾರರು. ಇವರು ತಮ್ಮ ವಚನಗಳಲ್ಲಿ ವರ್ಗ, ವರ್ಣ, ಸಂಬಂಧಿ ಭೇಧಭಾವಗಳನ್ನು ಕೇಂದ್ರವಾಗಿಸಿಕೊಂಡು ಪ್ರತಿ ಹಂತದಲ್ಲಿಯೂ ಅದರ ಅಸ್ತಿತ್ವವನ್ನು ಪ್ರಶ್ನಿಸುತ್ತಾ ಬಂದಿದ್ದಾರೆ. ಅಲ್ಲದೆ ಸ್ಥಾಪಿತ ಮೌಲ್ಯಗಳನ್ನು ಅಲ್ಲಗಳೆದು ಹೊಸ ಮೌಲ್ಯ ನಿರ್ಣಯಕ್ಕೆ ಮುಂದಾಗುವುದರ ಮೂಲಕ ಪ್ರತಿಯೊಬ್ಬರೂ ತಮ್ಮದೇ ಆದ ರೀತಿಯಲ್ಲಿ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ಸಾರಿದ್ದಾರೆ.

ವಚನ ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡಿದಾಗ ಗುರುತಿಸಬಹುದಾದ ಪ್ರಮುಖವಾದ ಅಂಶವೆಂದರೆ ಪ್ರತಿ ವಚನಕಾರರೂ ವರ್ಗ, ವರ್ಣ, ಲಿಂಗ ಭೇದವನ್ನು ತಮ್ಮದೇ ಆದ ರೀತಿಯಲ್ಲಿ ವಿರೋಧಿಸಿರುವುದು ಕೆಲವರು ಇವುಗಳ ಅಸ್ತಿತ್ವವನ್ನು ನೇರವಾಗಿ ವಿರೋಧಿಸಿದರೆ ಕೆಲವರು ಅದನ್ನು ತಮ್ಮದೇ ಆದ ವಿಭಿನ್ನ ಮಾದರಿಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ವ್ಯಕ್ತಿ ಆಧಾರಿತ ಜಾತಿ ವ್ಯವಸ್ಥೆ ಹಾಗೂ ಲಿಂಗ ತಾರತಮ್ಯ ಪ್ರಧಾನವಾಗಿ ಸಮಾಜ ನಿಯಂತ್ರಕ ಸಾಧನವಾಗಿದ್ದ ಸಂದರ್ಭದಲ್ಲಿ ಈ ವಚನಕಾರರು ಇವುಗಳ ನಡುವಿನ ಅಂತರವನ್ನು ತೊಡೆದು ಹಾಕಲು ಪ್ರಯತ್ನಿಸಿದರು.

ವೃತ್ತಿ ಆಧಾರಿತ ಜಾತಿ ವ್ಯವಸ್ಥೆ ವರ್ಗ ತಾರತಮ್ಯಕ್ಕೆ ಪ್ರಮುಖ ಕಾರಣವಾಗಿದ್ದ ಸಂದರ್ಭದಲ್ಲಿ ವಚನಕಾರರು ವೃತ್ತಿಗೆ ಮೇಲು ಕೀಳು ಎಂಬ ಭೇದವಿಲ್ಲ ಎಂದು ಸಾರುವ ಮೂಲಕ ಅದರ ವಿರುದ್ಧ ಪ್ರತಿಭಟನೆಯನ್ನು ಆರಂಭಿಸಿದರು. ವೃತ್ತಿಗೆ ಕಾಯಕದ ಮಹತ್ವವನ್ನು ನೀಡುವ ಮೂಲಕ 'ಕಾಯಕವೇ ಕೈಲಾಸ' ಎಂದು ಕಾಯಕ ಮಾಡುವವರೆಲ್ಲರೂ ಸಮಾನರು ಎಂದು ಸಾರಿದರು. ಬಸವಣ್ಣ ತನ್ನ ಒಂದು ವಚನದಲ್ಲಿ

ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ?
ಡೋಹಾರನೆಂಬೆನೆ ಕಕ್ಕಯ್ಯನ?
ಮಾದಾರನೆಂಬೆನೆ ಚೆನ್ನಯ್ಯನ?
ಆನು ಹಾರವನೆಂದರೆ ಕೂಡಲಸಂಗಯ್ಯ ನಗುವನಯ್ಯಾ [೧]

ಎಂದು ವೃತ್ತಿ ಆಧಾರದಿಂದ ಜಾತಿ ನಿರ್ಣಯವಾಗುವ ಕ್ರಮವನ್ನು ವ್ಯಂಗ್ಯ ಮಾಡುವ ಮೂಲಕ ವಿರೋಧಿಸುತ್ತಾನೆ. ಬಸವಣ್ಣ ಅಲ್ಲದೆ ಬಹುತೇಕ ಮೇಲು ವರ್ಗದ ವಚನಕಾರರು ತಮ್ಮನ್ನು ಕೆಳವರ್ಗದ ವಚನಕಾರರ ಮಕ್ಕಳೆಂದು ಗುರುತಿಸಿಕೊಳ್ಳುವುದರ ಮೂಲಕ ಜಾತಿಯ ಮೇಲುಕೀಳು ಭಾವವನ್ನು ವಿರೋಧಿಸಿದ್ದಾರೆ. ''ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹಾರ ಕಕ್ಕಯ್ಯ, ಚಿಕ್ಕಯ್ಯ ನೆಮ್ಮಯ್ಯ ಕಾಣಯ್ಯ, ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ'[೨] (ಬಸವಣ್ಣ). ''ಮಡಿವಾಳಯ್ಯನ ಪ್ರಸಾದವ ಕೊಂಡು ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯಾ, ಸಿದ್ಧರಾಮಯ್ಯನ ಪ್ರಸಾದವ ಕೊಂಡು ಎನ್ನ ಕರಣಂಗಳು ಶುದ್ಧವಾಯಿತಯ್ಯ'' (ಅಕ್ಕ)[೩]. ಎಂದು ಎಲ್ಲರೂ ಸಮಾನರು ಎಂಬ ಭಾವವನ್ನು ವ್ಯಕ್ತಪಡಿಸುವದರ ಮೂಲಕ ವರ್ಗ ತಾರತಮ್ಯದ ವಿರುದ್ಧ ಪ್ರತಿಭಟನೆಯನ್ನು ಸಾರಿದ್ದಾರೆ. ಜಾತಿ ವ್ಯವಸ್ಥೆಯ ವಿರುದ್ಧ ತೀವ್ರ ವಿರೋಧವನ್ನು ವ್ಯಕ್ತಪಡಿಸಿದ ಸಿದ್ಧರಾಮ ತನ್ನ ವಚನದಲ್ಲಿ ಸಮಕಾಲೀನ ವಚನಕಾರರ ಜಾತಿನಿರ್ಣಯವನ್ನು ಅಲ್ಲಗಳೆಯುತ್ತಾ

ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೋ।
ಕುಲವೆ ಡೋಹರನ ? ಕುಲವೇ ಮಾದರನ ? ಕುಲವೆ ದೂರ್ವಾಸನ ?
ಕುಲವೆ ವ್ಯಾಸನ ? ಕುಲವೆ ವಾಲ್ಮೀಕನ? ಕುಲವೆ ಕೌಂಡಿನ್ಯನ?
ಕುಲವ ನೋಳ್ಪಡೆ ಹುರುಳಿಲ್ಲ [೪]

ಎಂದು ವ್ಯಕ್ತಿ ಮುಖ್ಯವೇ ವಿನಃ ಜಾತಿ ಅಥವಾ ಹುಟ್ಟು ಮುಖ್ಯವಲ್ಲ ಎಂಬ ಅಂಶವನ್ನು ಎತ್ತಿ ಹಿಡಿದಿದ್ದಾನೆ. ಬಸವಣ್ಣ ಕೂಡ ಹುಟ್ಟಿನ ಶ್ರೇಷ್ಠತೆಯನ್ನು ಅಲ್ಲಗಳೆಯುತ್ತಾ

ಚೆನ್ನಯ್ಯನ ಮನೆಯ ದಾಸಿಯ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು
ಇವರಿಬ್ಬರು ಹೊಲದಲ್ಲಿ ಬೆರಣಿಗೆ ಹೋಗಿ ಸಂಗವ ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು [೫]

ಎಂದು ತನ್ನ ಹುಟ್ಟನ್ನು ಚೆನ್ನಯ್ಯ, ಕಕ್ಕಯ್ಯ ಮನೆಯ ದಾಸಿಯ ಮಗ ಎಂದು ಗುರುತಿಸಿಕೊಳ್ಳುವುದರ ಮೂಲಕ ತನ್ನದೇ ಆದ ರೀತಿಯಲ್ಲಿ ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾನೆ.

ವರ್ಗ ತಾರತಮ್ಯದ ಜೊತೆ ವರ್ಣ ವ್ಯವಸ್ಥೆ ಕೂಡ ಹೆಚ್ಚು ಪ್ರಚಲಿತವಿದ್ದ ಸಂದರ್ಭದಲ್ಲಿ ಬಸವಾದಿ ವಚನಕಾರರು ಜಾತಿ ವ್ಯವಸ್ತೆಯ ಜೊತೆ ಜೊತೆಯಲ್ಲಿಯೇ ವರ್ಣ ವ್ಯವಸ್ತೆಯನ್ನು ಕೂಡ ವಿರೋಧಿಸಿದರು.

---

೧. ವಚನ ಕಮ್ಮಟ (ಸಂ) ಕೆ.ಮರುಳ ಸಿದ್ಧಪ್ಪ, ಕಿ.ರಂ.ನಾಗರಾಜ, ವ.ಸಂ.೧೮೦, ಪು.೪೦

೨. ವಚನ ಕಮ್ಮಟ (ಸಂ) ಕೆ.ಮರುಳ ಸಿದ್ಧಪ್ಪ, ಕಿ.ರಂ.ನಾಗರಾಜ, ವ.ಸಂ.೧೮೦, ಪು.೪೦

೩. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೬೫

೪. ವಚನ ಕಮ್ಮಟ (ಸಂ) ಕೆ.ಮರುಳ ಸಿದ್ಧಪ್ಪ, ಕಿ.ರಂ.ನಾಗರಾಜ, ವ.೩೪೫, ಪು.೮೦

೫. ವಚನ ಕಮ್ಮಟ (ಸಂ) ಕೆ.ಮರುಳ ಸಿದ್ಧಪ್ಪ, ಕಿ.ರಂ.ನಾಗರಾಜ, ವ.೧೮೪, ಪು.೪೧

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚತುರ್ವರ್ಣ ವ್ಯವಸ್ಥೆಯನ್ನು ತೀವ್ರವಾಗಿ ವಿರೋಧಿಸಿದ ಇವರು ಬ್ರಾಹ್ಮಣ ಮೇಲು ಶೂದ್ರ ಕೀಳು ಎಂಬ ಮನೋಭಾವವನ್ನು ತೊಡೆದು ಹಾಕಿದರು. ಬಸವಣ್ಣನಂತೂ '**ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ**' ಎಂದು ಬ್ರಾಹ್ಮಣತ್ವದ ಶ್ರೇಷ್ಠತೆಯನ್ನು ಬುಡಮೇಲು ಮಾಡಲು ಪ್ರಯತ್ನಿಸುತ್ತಾನೆ. ಇತರೆ ವಚನಕಾರರ ವಚನಗಳಲ್ಲಿಯೂ ಕೂಡ ವರ್ಣ ತಾರತಮ್ಯದ ವಿರುದ್ಧದ ವಚನಗಳನು ಗುರುತಿಸಬಹುದಾಗಿದೆ. ಈ ರೀತಿ ವಚನಕಾರರು ವರ್ಗ ಮತ್ತು ವರ್ಣ ತಾರತಮ್ಯವನ್ನು ವಿರೋಧಿಸುವುದರ ಮೂಲಕ ಅದರ ವಿರುದ್ಧ ಪ್ರತಿಭಟನೆಯನ್ನು ಸಾರಿದರು.

ಪುರುಷ ಪ್ರಧಾನ ವ್ಯವಸ್ಥೆಯ ಕಾರಣ ಹೆಣ್ಣು ಗಂಡು ಎಂಬ ಭೇದ ಭಾವ ಹೆಚ್ಚು ಪ್ರಚಲಿತದಲ್ಲಿದ್ದ ಕಾಲದಲ್ಲಿ ವಚನಕಾರರು ಸ್ತ್ರೀಯರಿಗೆ ಆಧ್ಯಾತ್ಮ ಸಾಧನೆಯಲ್ಲಿ ಸಮಾನತೆಯನ್ನು ನೀಡಿದ್ದೇ ಒಂದು ರೀತಿಯ ಪ್ರತಿಭಟನೆಯಾಗಿದೆ. ಸಾಹಿತ್ಯ ರಚನೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಕಾಯಕದಲ್ಲಿ ಪಾಲ್ಗೊಳ್ಳುವಿಕೆಯ ಮೂಲಕ ಈ ಕಾಲದ ವಚನಕಾರ್ತಿಯರು ತಾವು ಪುರುಷರಿಗಿಂತ ಯಾವುದರಲ್ಲಿಯೂ ಕೂಡ ಕಡಿಮೆ ಇಲ್ಲ ಎನ್ನುವ ಮೂಲಕ ಸಮಾನತೆಯ ಅಂಶವನ್ನು ಸಾರಿದರು. ಹೆಣ್ಣು ಗಂಡಿನ ಭಿನ್ನತೆಗೆ ಕಾರಣವಾದ ಜೈವಿಕ ರಚನೆಯನ್ನು ಕುರಿತು ಚಿಂತಿಸಿದ ವಚನಕಾರರು ಆತ್ಮದ ವಿಶ್ಲೇಷಣೆಯ ಮೂಲಕ ಮೇಲು-ಕೀಳು ಭಾವವನ್ನು ತೊಡೆದು ಹಾಕಲು ಪ್ರಯತ್ನಿಸಿದರು.

**ಮೊಲೆ - ಮುಡಿ ಬಂದರೆ ಹೆಣ್ಣೆಂಬರು**
**ಗಡ್ಡ - ಮೀಸೆ ಬಂದರೆ ಗಂಡೆಂಬರು**
**ನಡುವೆ ಸುಳಿವಾತನು**
**ಗಂಡೂ ಅಲ್ಲ, ಹೆಣ್ಣೂ ಅಲ್ಲ, ಕಾಣಾರಾಮನಾಥ** [೬]

ಎಂದು ಸ್ತ್ರೀ ಸಮಾನತೆ ಮತ್ತು ಸ್ವಾತಂತ್ರ್ಯಕ್ಕೆ ನಾಂದಿ ಹಾಡಿದವನು ದೇವರ ದಾಸಿಮಯ್ಯ. ಇದೇ ಸಂಸ್ಕೃತಿಯನ್ನು ಮುಂದುವರಿಸಿದ ಸಿದ್ಧರಾಮ, ಅಲ್ಲಮಪ್ರಭು, ಚೆನ್ನಬಸವಣ್ಣ ಮುಂತಾದ ವಚನಕಾರರು ತಮ್ಮ ವಚನಗಳಲ್ಲಿ ಲಿಂಗ ತಾರತಮ್ಯದ ವಿರುದ್ಧ ಸಮರ ಸಾರಿದ್ದಾರೆ. ಸಿದ್ಧರಾಮನು '**ಹೆಣ್ಣು ಮಾಯೆಯಲ್ಲ, ಹೆಣ್ಣು ರಕ್ಕಸಿಯಲ್ಲ, ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ**'[೭] ಎಂದು ಹೆಣ್ಣನಲ್ಲಿ ದೇವರ ಅಸ್ತಿತ್ವವನ್ನು ಹುಡುಕಲು ಪ್ರಯತ್ನಿಸಿದ್ದಾನೆ. ಈ ರೀತಿ ವಚನಕಾರರು ತಮ್ಮ ಸಾಹಿತ್ಯ ರಚನೆಯ ಮುಖಾಂತರ ಸಾಮಾಜಿಕ ನಂಬಿಕೆಗಳ ವಿರುದ್ಧ ದನಿ ಎತ್ತಿದರು. ಅವರು ತಮ್ಮ ಪ್ರತಿಭಟನೆಗೆ ಆಯ್ದುಕೊಂಡ ಮಾರ್ಗ ಗದ್ಯಾತ್ಮಕ ಶೈಲಿಯ ವಚನ ರಚನೆ. ತಮ್ಮ ಮನದಾಳದ ಮಾತುಗಳನ್ನು ಸರಳ ಹಾಗೂ ಸುಲಭವಾಗಿ ಅಭಿವ್ಯಕ್ತ ಪಡಿಸಲು ಸಾಧ್ಯವಾದ ವಚನಗಳ ರಚನೆಯ ಮೂಲಕ ಈ ವಚನಕಾರರು ಸಾಮಾಜಿಕ ವ್ಯವಸ್ಥೆಯ ವಿರುದ್ಧ ತೀವ್ರವಾದ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು.

ತನ್ನ ಬಹುಪಾಲು ಸಾಹಿತ್ಯ ರಚನೆಯನ್ನು ಸಾಮಾಜಿಕ ಸಂಸ್ಕೃತಿ ಮತ್ತು ಸಂಪ್ರದಾಯದ ವಿರುದ್ಧ ಪ್ರತಿಭಟನೆಗೆ ಮೀಸಲಾಗಿರಿಸಿದವಳು ಅಕ್ಕಮಹಾದೇವಿ. ಅವಳು ತನ್ನ ವಚನಗಳಲ್ಲಿ ಲೌಕಿಕದ ನಿರಾಕರಣೆ ಹಾಗೂ ಪಾರಮಾರ್ಥಿಕದ ಸ್ವೀಕರಣೆಯ ಮೂಲಕ ಪ್ರತಿ ಹಂತದಲ್ಲಿಯೂ ಸಮಾಜ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ಸಾರಿದ್ದಾಳೆ. ಅಕ್ಕನ ಪ್ರತಿಭಟನೆಯ ಸ್ವರೂಪವನ್ನು ಅವಳ ವಚನಗಳ ಅಧ್ಯಯನದಿಂದ ಸಮರ್ಪಕವಾಗಿ ಅರಿಯಬಹುದಾಗಿದೆ.

---

೬. ವಚನ ಕಮ್ಮಟ (ಸಂ) ಕೆ.ಮರುಳ ಸಿದ್ದಪ್ಪ, ಕಿ.ರಂ.ನಾಗರಾಜ, ವ.೩೮, ಪು.೧೦

೭. ಸಿದ್ಧರಾಮೇಶ್ವರ ವಚನ ಸಂಪುಟ : ಭಾಗ-೪ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ವ.೪೬೮, ಪು.೧೩೧

# ೩
# ಅಕ್ಕನ ವಚನಗಳಲ್ಲಿ ನಿರಾಕರಣ ಪ್ರಕ್ರಿಯೆ
## ಅ. ಸಂಸಾರದ ನಿರಾಕರಣೆ

- ಲೌಕಿಕ ಭೋಗಾಸಕ್ತಿಯಿಂದ ಕೂಡಿದ ಸಂಸಾರದ ನೇರ ನಿರಾಕರಣೆ.
- ಸಾಂಸಾರಿಕ ಸಂಬಂಧಗಳ ನಿರಾಕರಣೆಯ ಮೂಲಕ ಕುಟುಂಬ ವ್ಯವಸ್ಥೆಯ ನಿರಾಕರಣೆ.
- ಸಾಂಸಾರಿಕ ಮೌಲ್ಯಗಳಾದ ಮದುವೆ, ನೈತಿಕತೆ, ದಾಂಪತ್ಯದ ತಿರಸ್ಕಾರ.
- ಶಾಶ್ವತವಾದ ಪಾರಮಾರ್ಥಿಕ ದೃಷ್ಟಿಯುಳ್ಳ ಸಂಸಾರ, ಅನ್ಯೋನ್ಯ ದಾಂಪತ್ಯದ ಸ್ವೀಕಾರ ಹಾಗೂ ಹಂಬಲ.

**ಕು**ಟುಂಬ ಸಮಾಜದ ಅತಿ ಚಿಕ್ಕ ಮತ್ತು ಅತ್ಯಂತ ಪ್ರಮುಖ ಘಟಕ. ವ್ಯಕ್ತಿಯ ವೈಯಕ್ತಿಕ ಮತ್ತು ಸಾಮಾಜಿಕ ಸಂಬಂಧಗಳು ಏರ್ಪಡುವುದು ಈ ಕುಟುಂಬ ಸಂಘಟನೆಯ ಮೂಲಕವೇ. ಕುಟುಂಬ ಅಥವಾ ಸಂಸಾರ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಹೆಣ್ಣಿನ ಮೇಲೆ ಕುಟುಂಬ ಹಾಗೂ ಅದರ ಸದಸ್ಯರ ಹಿಡಿತ ಮತ್ತು ದಬ್ಬಾಳಿಕೆಯನ್ನು ಹಿಂದಿನಿಂದಲೂ ಕಾಣಬಹುದು. ಇಂತಹ ಸಂಸಾರ ಬಂಧನವನ್ನು ತಿರಸ್ಕರಿಸುವುದರ ಮೂಲಕ ಅಕ್ಕ ಸಾಮಾಜಿಕ ಪ್ರತಿಭಟನೆಗೆ ಮುಂದಾಗುತ್ತಾಳೆ. ನೋವು, ಹಿಂಸೆ, ಜಂಜಡಗಳಿಗೆ ಕಾರಣವಾದ ಲೌಕಿಕ ಸಂಸಾರವನ್ನು ನಿರಾಕರಿಸುವುದರ ಜೊತೆ ಜೊತೆಯಲ್ಲಿಯೇ ತನ್ನದೇ ಆದ ಮಾದರಿ ಸಂಸಾರವೊಂದರ ನಿರೂಪಣೆಗೆ ಮುಂದಾಗುತ್ತಾಳೆ. ಸಾಂಸಾರಿಕ ಸಂಬಂಧಗಳಾದ ಸತಿತ್ವ, ಮದುವೆ, ಸಂಪ್ರದಾಯ, ಗಂಡ ಮುಂತಾದ ಕಲ್ಪನೆಗಳನ್ನು ಮುರಿದು ಕಟ್ಟುವ ಕೆಲಸವನ್ನು ಮಾಡುತ್ತಾಳೆ.

ಅಕ್ಕ ಸಂಸಾರ ನಿರಾಕರಣೆಯ ಮೂಲಕ ಸಾಮಾಜಿಕ ಸಂಘರ್ಷಕ್ಕೆ ಮುಂದಾಗುತ್ತಾಳೆ. ಕುಟುಂಬದ ಎಲ್ಲಾ ನಿರ್ಧಾರಗಳು ಗಂಡಿಗೆ ಸೀಮಿತವಾಗಿದ್ದ ಸಂದರ್ಭದಲ್ಲಿ ತನ್ನ ಜೀವನದ ಆಗುಹೋಗುಗಳನ್ನು ಕುರಿತಂತೆ ಚಿಂತಿಸಿ ನಿರ್ಧಾರಗಳನ್ನು ತೆಗೆದುಕೊಳ್ಳುತ್ತಾಳೆ. ಸಂಸಾರದ ರೀತಿ ರಿವಾಜುಗಳು, ಕಟ್ಟಕಟ್ಟಳೆಗಳು ಹಾಗೂ ಸಾಂಪ್ರದಾಯಿಕ ಮೌಲ್ಯಗಳನ್ನು ನಿರಾಕರಿಸುವುದರ ಮೂಲಕ ಸಂಸಾರದ ಅನಿಶ್ಚಿತತೆಯನ್ನು ಸಾರುತ್ತಾಳೆ. ಲೌಕಿಕ ಸಂಸಾರಕ್ಕಿಂತ ಭಿನ್ನವಾದ ವಿಕಾಸದ ನೆಲೆ ಅಕ್ಕನದು. ಮಾನವೀಯ ಸಂಬಂಧಗಳು ಅರ್ಥಹೀನವಾಗಿರುವ ಸಂದರ್ಭದಲ್ಲಿ ಅದರಿಂದ ಬಿಡುಗಡೆ ಹೊಂದುವ ತೀವ್ರವಾದ ಹಂಬಳ ಇವಳಲ್ಲಿದೆ. ಸಾಮಾಜಿಕ ಒಪ್ಪಿತ ಸಂಸಾರ ಬಂಧನವನ್ನು ಮುರಿದು ತನ್ನದೇ ಆದ ರೀತಿಯಲ್ಲಿ ಅದನ್ನು ರೂಪಿಸಿಕೊಳ್ಳುವ ಪ್ರಯತ್ನ ಅಕ್ಕನದು. ಈ ಹಿನ್ನೆಲೆಯಲ್ಲಿ ದೊರೆಯುವ ಪ್ರಮುಖ ದಾಖಲೆ ವಚನಗಳು. ಈ ವಚನಗಳ ಆಧಾರದಿಂದ ಅಕ್ಕನ ಸಂಸಾರ ನಿರಾಕರಣೆ ಯಾವ ಸ್ವರೂಪದ್ದು ಎಂಬುದನ್ನು ತಿಳಿಯಬಹುದು.

## ಲೌಕಿಕ ಭೋಗಾಸಕ್ತಿಯಿಂದ ಕೂಡಿದ ಸಂಸಾರದ ನೇರ ನಿರಾಕರಣೆ

ಅಕ್ಕನ ಜೀವನ ಹಾಗೂ ವಚನಗಳನ್ನು ಪರಿಭಾವಿಸಿದಾಗ ಆಕೆ ಸಂಸಾರದ ಬಗೆಗೆ ಕಟ್ಟಿಕೊಡುವ ವ್ಯಾಖ್ಯಾನ ವಿಶಿಷ್ಟ ಹಾಗೂ ವಿಭಿನ್ನ. ಒಲ್ಲದ ಸಂಸಾರವನ್ನು ಧಿಕ್ಕರಿಸಿ ಒಪ್ಪುವ ಸಂಸಾರವನ್ನು ಸ್ವೀಕರಿಸಿ ಬದುಕಿದ ದಿಟ್ಟ ಮಹಿಳೆ ಅಕ್ಕ. ಆಕೆಯ ಜೀವನವೇ ಸಂಸಾರದ ಬಗೆಗೆ ತಳೆದ ದಿಟ್ಟ ನಿಲುವನ್ನು ಅನಾವರಣಗೊಳಿಸುತ್ತವೆ. ಲೌಕಿಕ ಸಂಸಾರವನ್ನು ತೀವ್ರವಾಗಿ ವಿರೋಧಿಸುವ ಅಕ್ಕ ಪಾರಮಾರ್ಥಿಕ ಸಂಸಾರದತ್ತ ಮುಖ ಮಾಡುತ್ತಾಳೆ. ವೈಯಕ್ತಿಕತೆಯ ನಾಶಕ್ಕೆ ಕಾರಣವಾದ ಲೌಕಿಕ ಸಂಸಾರದ ಸ್ವರೂಪ ಹಾಗೂ ಅದರ ನಿರ್ಧಾರಿತ ಮೌಲ್ಯಗಳೇ ಅಕ್ಕನ ನಿರಾಕರಣ ಪ್ರಕ್ರಿಯೆಗೆ ಪ್ರಮುಖ ಕಾರಣ ಎಂದೆನಿಸುತ್ತದೆ.

*ಅಕ್ಕಟಕ್ಕಟಾ ಸಂಸಾರ ಹಗರಣ ಬಂದಾಡಿತ್ತಲ್ಲಾ ।*
*ಅಪ್ಪ ಬೊಪ್ಪ ಎಂಬ ಚೋಹವು*
*ಅದು ಮೊಟ್ಟ ಮೊದಲು ಬಂದಾಡಿತ್ತು*
*ತುಪ್ಪವ ತೊಡೆದಂತೆ ಮೀಸೆಯ ಚೋಹವು*
*ಅದು ನಟ್ಟ ನಡುವೆ ಬಂದಾಡಿತ್ತು.*
*ಮುಪ್ಪು ಮುಪ್ಪು ಎಂಬ ಚೋಹವು*
*ಅದು ಕಟ್ಟ ಕಡೆಯಲ್ಲಿ ಬಂದಾಡಿತ್ತು* ೧

ಈ ವಚನದಲ್ಲಿ ಅಕ್ಕ ಸಂಸಾರವನ್ನು ಹಗರಣ ಎಂದು ಕರೆಯುವುದರ ಮೂಲಕ ಅದರ ಸಂಪರ್ಕದಿಂದ ಬಿಡುಗಡೆ ಅಷ್ಟು ಸುಲಭ ಸಾಧ್ಯವಲ್ಲ ಎನ್ನುತ್ತಾಳೆ. ಇದು ತಾನು ಬಯಸಿಯೂ, ಬಯಸದೆಯೂ ಬೆಂಬತ್ತಿ ಬರುತ್ತಿವೆ. ಇಲ್ಲಿ ಬರುವ ಪ್ರತಿ ಪಾತ್ರವೂ ಅದರದ್ದೇ ಆದ ನೆಲೆಯನ್ನೊಳಗೊಂಡಿದ್ದು ಒಂದಕ್ಕೊಂದು ಆಕರ್ಷಿತವಾಗಿ, ಅವಲಂಬಿತವಾಗಿ, ಬದುಕಿವೆ. ಪಿತೃಪ್ರಧಾನ ವ್ಯವಸ್ಥೆಯ ಪ್ರಮುಖ ಪಾತ್ರವಾದ 'ಅಪ್ಪ' ಮೊದಲಿಗೆ ಪೊರೆಯುವ, ಸಂತೈಸುವ ಗುಣವುಳ್ಳದ್ದಾದರೆ ನಂತರದ ಹಂತದಲ್ಲಿ ಅದು ತನ್ನವರನ್ನು ಹಿಡಿತದಲ್ಲಿಟ್ಟುಕೊಳ್ಳುವ, ದರ್ಪ, ದಬ್ಬಾಳಿಕೆಯ ಪಾತ್ರವಾಗಿ ಮಾರ್ಪಡುತ್ತದೆ. ಇದರಿಂದ ಬಿಡುಗಡೆ ಅಸಾಧ್ಯ. ಇದು ಮಾಯೆಯ ರೀತಿ ಬೆಂಬಿಡದೆ ಬರುತ್ತಿದೆ. ಕಡೆಯ ಹಂತದಲ್ಲಿ 'ಮುಪ್ಪು , ಮುಪ್ಪು' ಎಂಬ ಚೋಹ ಮನುಷ್ಯನ ಅವಸಾನದ ಹಂತ. ಇದು ಮತ್ತಷ್ಟು ಆಸೆ - ಆಕಾಂಕ್ಷೆಗಳಿಗೆ ಎಡೆ ಮಾಡಿಕೊಡುತ್ತಿದೆ. ತನ್ನವರೆಲ್ಲರನ್ನೂ ತನ್ನ ಅಧೀನದಲ್ಲಿರಿಸಿಕೊಳ್ಳಲು ಬಯಸುವುದಲ್ಲದೆ ಕುಟುಂಬದ ಇತರೆ ಸದಸ್ಯರಲ್ಲಿ ತನ್ನ ವ್ಯಕ್ತಿತ್ವವನ್ನು ಗುರುತಿಸಿಕೊಳ್ಳಲು ಅಪೇಕ್ಷಿಸುತ್ತದೆ. ಇಂತಹ ಸಂಸಾರದಿಂದ ವ್ಯಕ್ತಿಯ ವೈಯಕ್ತಿಕ ಆಸೆ ಆಕಾಂಕ್ಷೆಗಳಿಗೆ ಸ್ವತಂತ್ರ ಅಸ್ತಿತ್ವ ಇಲ್ಲದಂತಾಗುತ್ತವೆ. ಇಂತಹ ಸಂಸಾರದಿಂದ ಬಿಡುಗಡೆ ಹೊಂದುವ ಬಯಕೆ ಅಕ್ಕನದು.

*ಸಂಸಾರವೆಂಬ ಹಗೆಯಯ್ಯಾ ಎನ್ನತಂದೆ*
*ಎನ್ನವಂಶ ವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯಾ*
*ಎನ್ನವರನರಸಿಯರಸಿ ಹಿಡಿದು ಕೊಲ್ಲುತ್ತಿದೆಯಯ್ಯಾ*
*ನಿನ್ನ ನಾ ಮರೆಹೊಕ್ಕು ಕಾಯಯ್ಯ*
*ಎನ್ನ ಭಿನ್ನಪವನಧಾರಿಸು ಚೆನ್ನ ಮಲ್ಲಿಕಾರ್ಜುನ* ೨

---

೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೦

೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೧೫

ಸಂಸಾರ ವ್ಯಕ್ತಿಯ ವೈಯಕ್ತಿಕ ಸಾಧನೆಗೆ ಅಡ್ಡಿಯನ್ನುಂಟು ಮಾಡುವ ವೈರಿಯಾಗಿ ಕಾಡುತ್ತಿದೆ. ಬಯಸಿಯೋ, ಬಯಸದೆಯೋ ವಂಶದಿಂದ ವಂಶಕ್ಕೆ ಬೆಂಬಿಡದೆ ಬರುತ್ತಿದೆ. ಇದರಿಂದ ಬಿಡುಗಡೆ ಬಯಸಿದರೂ ಅದು ಸಾಧ್ಯವಿಲ್ಲ. ಈ ಸಂಸಾರದ ಮತ್ತೊಂದು ಕ್ರೂರತೆ ಎಂದರೆ ಕಾಯಬೇಕಾದ ಸಂಸಾರವೇ ಕೊಲ್ಲುವ ಗುಣದಿಂದಾಗಿ ಹಗೆಯಾಗಿ ಮಾರ್ಪಟ್ಟಿದೆ. ಇಂತಹ ಸಂಸಾರದಿಂದ ಸುಖಕ್ಕಿಂತ ದುಃಖವೇ ಹೆಚ್ಚಾಗಿದೆ. ಲೌಕಿಕ ಬದುಕಿನ ಎಲ್ಲಾ ಆಸೆ ಆಕಾಂಕ್ಷೆಗಳಿಗೆ ಈ ಸಂಸಾರವೇ ಕಾರಣವಾಗಿರುವುದನ್ನು ಗುರುತಿಸಿದ್ದಾಳೆ ಅಕ್ಕ.

*ನಾ ಹುಟ್ಟಿದಲ್ಲಿ ಸಂಸಾರ ಹುಟ್ಟಿತ್ತು*
*ಸಂಸಾರ ಹುಟ್ಟಿದಲ್ಲಿ ಅಜ್ಞಾನ ಹುಟ್ಟಿತ್ತು*
*ಅಜ್ಞಾನ ಹುಟ್ಟಿದಲ್ಲಿ ಆಶೆ ಹುಟ್ಟಿತ್ತು*
*ಆಶೆ ಹುಟ್ಟಿದಲ್ಲಿ ಕೋಪ ಹುಟ್ಟಿತ್ತು*
*ಆ ಕೋಪಾಗ್ನಿಯ ತಾಮಸಧೂಮ್ರ ಮುಸುಕಿದಲ್ಲಿ*
*ನಾನಿಮ್ಮ ಮರೆದು ಭವದುಃಖಕ್ಕೀಡಾದೆ*
*ನೀ ಕರುಣದಿಂದೆತ್ತಿ ಎನ್ನ ಮರಹ ಬಿಂಗಡಿಸಿ*
*ನಿಮ್ಮ ಪಾದವನರುಹಿಸಯ್ಯಾ ಚೆನ್ನಮಲ್ಲಿಕಾರ್ಜುನ...* [೩]

ಜೀವದ ಹುಟ್ಟು ಸಂಸಾರದ ಅಸ್ತಿತ್ವಕ್ಕೆ ಮೂಲ ಹೇತುವಾದರೆ, ಅದರ ಬೆಳವಣಿಗೆ ಲೌಕಿಕ ಪ್ರಲೋಭನೆಗೆ ಕಾರಣವಾಗಿದೆ. ಹುಟ್ಟಿನಿಂದ ಕೋಪ, ಕೋಪದಿಂದ ಮರೆವು, ಮರೆವಿನಿಂದ ವಿವೇಕನಾಶ ಆರಂಭವಾಗುತ್ತದೆ. ಒಟ್ಟಾರೆ ಮಾನವನ ಎಲ್ಲಾ ಸಂಕಷ್ಟಗಳಿಗೆ ಸಂಸಾರ ಬಂಧನವೇ ಕಾರಣವಾಗಿದೆ. ಇಂತಹ ಸಂಸಾರ ಬಂಧನದಿಂದ ಮುಕ್ತಿ ಪಡೆಯಲು ಅಕ್ಕ ಮೊರೆ ಹೋಗುವುದು ಚೆನ್ನಮಲ್ಲಿಕಾರ್ಜುನನನ್ನು. ಅಕ್ಕನಿಗೆ ಈ ಸಂಸಾರದ ನಿಸ್ಸಾರತೆಯನ್ನು ತೋರಿಸಿದವನು ಗುರು.

ಈ ಸಂಸಾರ ಬಂಧನದಿಂದ ಸುಲಭವಾಗಿ ಹೊರಬರಲಾರದ ಅಕ್ಕ ಸಂಸಾರ ಬಂಧನಕ್ಕೆ ತಾನು ಸಿಲುಕಿದ ಬಗೆಯನ್ನು ತರಣಿಹುಳುವಿನ ರೂಪಕದ ಮೂಲಕ ತಿಳಿಸದ್ದಾಳೆ.

**ತರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ**
**ತನ್ನ ನೂಲು ತನ್ನನೆ ಸುತ್ತಿ ಸಾವಂತೆ**
**ಮನ ಬಂದುದು ಬಯಸಿ ಬೇವುತ್ತಿದ್ದೇನಯಾ**
**ಎನ್ನ ಮನವ ದುರಾಸೆಯ ಮಾಣಿಸ**
**ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನ** [೪]

ತರಣ ಹುಳು ತನ್ನಿಚ್ಚೆಯಿಂದ ಸುತ್ತಿಕೊಂಡ ನೂಲಿನಿಂದಲೇ ಸಾಯುವಂತೆ ಅಕ್ಕ ಕೂಡ ಮನಸ್ಸಿಗೆ ಬಂದುದನ್ನು ಬಯಸಿ ಬಯಸಿ, ಸಂಕಷ್ಟಕ್ಕೆ ಸಿಲುಕಿದ್ದಾಳೆ. ಈ ಸಂಸಾರ ಬಂಧನದಿಂದ ಬಿಡುಗಡೆ ಸಾಧ್ಯವೆ? ಎಂಬ ಸಂಶಯ ಬಂದಾಗ ತನ್ನೆಲ್ಲಾ ಆಸೆ, ಆಕಾಂಕ್ಷೆಗಳನ್ನು ನಿವಾರಿಸಿ ಮನಸ್ಸನ್ನು ಆಧ್ಯಾತ್ಮದತ್ತ ಹೊರಳಿಸುವ ಹೊಣೆಗಾರಿಕೆ

---

೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೧೧

೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೯೫

ನಿನ್ನದು ಎಂದು ಚೆನ್ನಮಲ್ಲಿಕಾರ್ಜುನನಲ್ಲಿ ಕೇಳಿಕೊಳ್ಳುತ್ತಾಳೆ. ಇಂತಹ ಸಂಸಾರ ಬಂಧನ ಒಪ್ಪಿತ ಮೌಲ್ಯ ಹಾಗೂ ಆಕರ್ಷಣೀಯವಾಗಿದ್ದ ಸಂದರ್ಭದಲ್ಲಿಯೂ ಅಕ್ಕ ಅದನ್ನು ತೀವ್ರವಾಗಿ ವಿರೋಧಿಸುತ್ತಾಳೆ.

**ರತ್ನದ ಸಂಕೋಲೆಯಾದಡೆ ತೊಡರಲ್ಲವೆ**
**ಮುತ್ತಿನ ಬಲೆಯಾದೆಡೆ ಬಂಧನವಲ್ಲವೆ?**
**ಚಿನ್ನದ ಕತ್ತಿಯಲ್ಲಿ ತಲೆಹೊಯ್ದಡೆ ಸಾಯದಿರ್ಪರೆ?**
**ಲೋಕದ ಭಜನೆ ಭಕ್ತಿಯಲ್ಲಿ ಸಿಲುಕಿದೆಡೆ**
**ಜನನ ಮರಣ ಬಿಡುವುದೆ ಚೆನ್ನಮಲ್ಲಿಕಾರ್ಜುನ** [೫]

ಎಂದು ಸಂಸಾರ ಸಂಬಂಧ ಎಷ್ಟೇ ಆಕರ್ಷಣೀಯವಾದರೂ ಕೂಡ ಅದರಿಂದ ನೆಮ್ಮದಿ ಸಾಧ್ಯವಿಲ್ಲ ಎನ್ನುತ್ತಾಳೆ. ಲೌಕಿಕ ಸಂಬಂಧದಿಂದ ಕೂಡಿದ ಭಕ್ತಿ, ಭಜನೆ ಯಾವುದರಿಂದಲೂ ಮುಕ್ತಿ ದೊರೆಯದು. ಸಂಸಾರ ಸಂಕೋಲೆಯಿಂದ ಹೊರಬರುವುದೇ ಇದಕ್ಕೆ ಸರಿಯಾದ ಮಾರ್ಗವೆಂದು ನಿರ್ಧರಿಸುತ್ತಾಳೆ. ಆದರೂ ಅದರಿಂದ ಹೊರಬರಲಾದ ಸಂಕಷ್ಟದ ಪರಿಸ್ಥಿತಿಯನ್ನು ಈ ರೀತಿ ನಿವೇದಿಸಿಕೊಳ್ಳುತ್ತಾಳೆ.

**ಹಿಂದಣ ಹಳ್ಳಿ, ಮುಂದಣ ತೊರೆ**
**ಸಲ್ಲುವ ಪರಿಯೆಂತು ಹೇಳು ।**
**ಹಿಂದಣ ಕೆರೆ, ಮುಂದಣ ಬಲೆ**
**ಹದುಳವಿನ್ನೆಲಿಯದು ಹೇಳು ।**
**ನೀನಿಕ್ಕಿದ ಮಾಯೆ ಕೊಲುತಿಪ್ಪುದು**
**ಕಾಯಯ್ಯ, ಕಾಯಯ್ಯ ಚೆನ್ನಮಲ್ಲಿಕಾರ್ಜುನ** [೬]

ಎಂದು ಸಂಸಾರದಿಂದ ಬಿಡುಗಡೆ ಪಡೆಯಲೂ ಆಗದ, ಅದರೊಳಗೆ ಬದುಕಲೂ ಆಗದ ದುಸ್ಥಿತಿಯಲ್ಲಿದ್ದಾಳೆ. ಆದರೂ ಸಹ ಅದರಿಂದ ಬಿಡುಗಡೆಗಾಗಿ ಸಕಲ ಪ್ರಯತ್ನಗಳನ್ನು ಮಾಡುತ್ತ ತನ್ನನ್ನು ಕಾಯುವುದು, ಕೊಲ್ಲುವುದು ನಿಮ್ಮ ಧರ್ಮ ಎಂದು ಚನ್ನಮಲ್ಲಿಕಾರ್ಜುನನ ಮೊರೆ ಹೋಗುತ್ತಾಳೆ. ಎಷ್ಟೇ ಸಂಕಷ್ಟದ ಪರಿಸ್ಥಿತಿ ಎದುರಾದರೂ ಯಾವುದಕ್ಕೂ ಅಂಜದೆ ಸಂಸಾರ ಬಂಧನವನ್ನು ತ್ಯಜಿಸಿ ಲೌಕಿಕ ಸಂಸಾರದಿಂದ ಮುಕ್ತಳಾಗುತ್ತೇನೆಂಬ ಅಚಲ ವಿಶ್ವಾಸ ಅಕ್ಕನದು.

ಕೆಲವು ಮೂಲಕಗಳ ಪ್ರಕಾರ ಅಕ್ಕ ಪ್ರಭುತ್ವದ ಹಿಡಿತಕ್ಕೆ ಬಲಿಯಾಗಿ ಲೌಕಿಕ ಸಂಸಾರಿಯಾಗಿ ಅದರ ಸಂಕಷ್ಟಗಳನ್ನು ಅನುಭವಿಸಿ ಅದರಿಂದ ಹೊರನಡೆದವಳು. ತಂದೆ, ತಾಯಿ, ಸಂಬಂಧಿಗಳು, ಕೌಶಿಕ. ಇವರಾರ ಬುದ್ಧಿ ಮಾತನ್ನೂ ಕೇಳದೆ ತನ್ನ ಮನೋ ನಿರ್ಧಾರದಂತೆ ಸಂಸಾರ ಬಂಧನವನ್ನು ಕಳೆದು ಪಾರಮಾರ್ಥಿಕ ಗಂಡನನ್ನು ಆಶಿಸಿ ದಿಟ್ಟ ಹೆಜ್ಜೆಯಿಟ್ಟಳು. ಈ ಹಂತದಲ್ಲಿ ಸಾಂಸಾರಿಕ ನಿಶಿದ್ಧ ನಡವಳಿಕೆಯನ್ನೇ ಸಮರ್ಥಿಸುವ ಅಕ್ಕ

---

೫. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೮೫

೬. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೪೨

ಹಸಿವಾದಡೆ ಊರೊಳಗೆ ಭಿಕ್ಷಾನ್ನಗಳುಂಟು.
ತೃಷೆಯಾದಡೆ ಕೆರ ಹಳ್ಳ ಬಾವಿಗಳುಂಟು.
ಅಂಗ ಶೀತಕ್ಕೆ ಬೀಸುವ ಅರಿವೆಗಳುಂಟು.
ಶಯನಕ್ಕೆ ಹಾಳು ದೇಗುಲಗಳುಂಟು.
ಚೆನ್ನಮಲ್ಲಿಕಾರ್ಜುನಯ್ಯ
ಆತ್ಮ ಸಂಗಾತಕ್ಕೆ ನೀನೇನಗುಂಟು ೭

ಎಂದು ಯಾರ ಹಂಗೂ ಇಲ್ಲದೆ ಚನ್ನಮಲ್ಲಿಕಾರ್ಜುನನ ಸಂಗಾತ್ಯದಲ್ಲಿ ಬದುಕುವ ದಿಟ್ಟತನ ತೋರುತ್ತಾಳೆ. ಸಂಸಾರಿಯಾದವನು ಭಿಕ್ಷೆ ಬೇಡುವುದಾಗಲೀ, ಹಾಳು ದೇಗುಲದಲ್ಲಿ ಮಲಗುವುದಾಗಲೀ ಕಂಡುಬರುವುದಿಲ್ಲ. ಸಂಸಾರ ಸಂಗದಿಂದ ಪರಿತ್ಯಕ್ತನಾದವನು ಮಾತ್ರ ಈ ರೀತಿಯ ಜೀವನ ಸಾಗಿಸಲು ಸಾಧ್ಯ. ಹೆಣ್ಣಿಗೆ ಸಂಸಾರವೇ ಸರ್ವಸ್ವವಾಗಿದ್ದ ಸಂದರ್ಭದಲ್ಲಿ ಅಕ್ಕ ತನ್ನೆಲ್ಲಾ ಸಾಂಸಾರಿಕ ಸುಖಭೋಗಗಳನ್ನು ತ್ಯಜಿಸಿ ಸಂನ್ಯಾಸಿ ಜೀವನವನ್ನು ಆಶ್ರಯಿಸುತ್ತಾಳೆ. ಇದು ಕುಟುಂಬ ವ್ಯವಸ್ಥೆ ಮತ್ತು ಸಮಾಜದ ಕಟ್ಟುಪಾಡುಗಳ ವಿರುದ್ಧ ಅಕ್ಕ ತೋರಿದ ಪ್ರತಿಭಟನೆಯಾಗಿದೆ.

## ಸಾಂಸಾರಿಕ ಸಂಬಂಧಗಳ ನಿರಾಕರಣೆಯ ಮೂಲಕ ಕುಟುಂಬ ವ್ಯವಸ್ಥೆಯ ನಿರಾಕರಣೆ

ಹಿಂದಿನ ಅಧ್ಯಾಯದಲ್ಲಿ ನಿಸ್ಸಾರ ಸಂಸಾರ ಹಾಗೂ ಅದರ ಅನಿಶ್ಚಿತತೆಯನ್ನು ಕುರಿತಂತೆ ಅಕ್ಕನ ಅಭಿಪ್ರಾಯ ಅವಳ ವಚನಗಳಲ್ಲಿ ಯಾವ ರೀತಿ ವ್ಯಕ್ತವಾಗಿದೆ ಎಂಬುದನ್ನು ತಿಳಿಸಲಾಗಿದೆ. ಅಕ್ಕ ಸಂಸಾರ ಜೀವನವನ್ನು ತ್ಯಜಿಸಿ ವಿರಕ್ತೆಯಾಗಿ ಹೊರಬಿದ್ದುದು ಅವಳ ಜೀವನದ ಮಹಾಸಾಧನೆ. ಸಂಸಾರ ನಿರಾಕರಣೆಯು ಅವಳ ಜೀವನದ ಪ್ರಮುಖವಾದ ಘಟ್ಟ. ಅವಳು ಸಂಸಾರಕ್ಕೆ ಕಾರಣವಾದ ವ್ಯಕ್ತಿಗಳ ಮೌಲ್ಯ ನಿರ್ಣಯಕ್ಕೆ ಮುಂದಾಗುತ್ತಾಳೆ. ಇಲ್ಲಿ ವ್ಯಕ್ತಿಗತ ಮಾನವೀಯ ಮೌಲ್ಯ ಮಾಯವಾಗಿ ಅಹಂಮ್ಮಿಕೆ, ದರ್ಪ, ಪ್ರಭುತ್ವ ಮನೆ ಮಾಡಿಕೊಂಡಿರುವುದನ್ನು ಗುರುತಿಸುತ್ತಾಳೆ. ವೈಯಕ್ತಿಕ ಸಾಧನೆಗೆ ಅಡ್ಡಿಯನ್ನುಂಟು ಮಾಡುವ ಇಂತಹ ಸಂಬಂಧಗಳನ್ನು ನಿರಾಕರಿಸಿ ಹೆಣ್ಣು ತನ್ನ ಅಸ್ತಿತ್ವವನ್ನು ಉಳಿಸಿ ಬೆಳೆಸಿಕೊಳ್ಳಲು ಸಹಾಯಕವಾಗುವ ಆದರ್ಶ ಸಂಬಂಧಗಳ ಹುಡುಗಾಟಕ್ಕೆ ಮುಂದಾಗುತ್ತಾಳೆ. ಈ ಸಂದರ್ಭದಲ್ಲಿ ಲೌಕಿಕ ಸಂಸಾರದ ಸಂಬಂಧಗಳ ನಿರಾಕರಣೆಗೆ ಕಾರಣಗಳನ್ನು ಸಂಬಂಧಿಸಿದ ವ್ಯಕ್ತಿಗಳ ಸ್ವರೂಪವನ್ನು ತನ್ನ ವಚನಗಳಲ್ಲಿ ವಿವರಿಸುತ್ತಾಳೆ.

ಅತ್ತೆ ಮಾಯೆ, ಮಾವ ಸಂಸಾರಿ.
ಮೂವರು ಮೈದುನರು ಹುಲಿಯಂತದಿರು,
ನಾಲ್ವರು ನಗೆವೆಣ್ಣು ಕೇಳು ಕೆಳದಿ.
ಐವರು ಭಾವಾರನೊಯ್ಪು ದೈವವಿಲ್ಲ.
ಆರು ಪ್ರಜೆಯತ್ತಿಗೆಯರ ಮೀರಲಾರೆನು.
ತಾಯೆ, ಹೇಳುವಡೆ ಏಳು ಪ್ರಜೆ ತೊತ್ತಿರ ಕಾಹು.

೭. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೩೬

ಕರ್ಮವೆಂಬ ಗಂಡನ ಬಾಯ ಟೊಣೆದು
ಹಾದರವನಾಡುವೆನು ಹರನ ಕೂಡೆ.
ಮನವೆಂಬ ಸಖಿಯ ಪ್ರಸಾದದಿಂದ
ಅನುಭಾವವ ಕಲಿತೆನು ಶಿವನೊಡನೆ
ಕರ ಚೆಲುವ ಶ್ರೀಶೈಲ ಚೆನ್ನಮಲ್ಲಿಕಾರ್ಜುನನ
ಸಜ್ಜನದ ಗಂಡನ ಮಾಡಿಕೊಂಬೆ [೮]

ಗಂಡನ ಮನೆಯ ಸಂಬಂಧಗಳು ವ್ಯಕ್ತಿತ್ವ ಹೀನವಾಗಿರುವ ಬಗೆಯನ್ನು ಸಂಸಾರದ ರೂಪಕದ ಮೂಲಕ ತಿಳಿಸಿದ್ದಾಳೆ. ಮಾಯೆ ಮತ್ತು ಸಂಸಾರ ಎರಡೂ ಕೂಡ ಲೌಕಿಕದ ಪ್ರಧಾನ ನೆಲೆಗಳು. ಇವು ಅತ್ತೆ ಮತ್ತು ಮಾವನ ರೀತಿಯಲ್ಲಿ ಬಂಧನಗಳಾಗಿ ಕಾಡಿವೆ. ತನ್ನನ್ನು ಪೊರೆಯಬೇಕಾದ ಈ ಸಂಬಂಧಗಳು ಕಾಡುವ ಹಿಂಸಿಸುವ ಸಂಬಂಧಗಳಾಗಿ ಮಾರ್ಪಟ್ಟಿವೆ. ಮೈದುನ, ನಾದಿನಿ, ಭಾವ – ಅತ್ತಿಗೆ ಈ ಎಲ್ಲಾ ಬಂಧಗಳು ಮಾನವೀಯತೆಯನ್ನು ಕಳೆದುಕೊಂಡಿವೆ. ಮೂವರು ಮೈದುನರು, ನಾಲ್ವರು ನಗೆವೆಣ್ಣು ಐವರು ಭಾವಂದಿರು, ಆರು ಜನ ಅತ್ತಿಗೆಯರು, ಏಳು ಜನ ತೊತ್ತುಗಳು ಕುಟುಂಬದ ಮೇಲೆ ನಿಯಂತ್ರಣ ಹೇರಿರುವುದನ್ನು ಕಾಣಬಹುದು. ವ್ಯಕ್ತಿ ಸ್ವಾತಂತ್ರ್ಯಕ್ಕೆ ಅವಕಾಶವಿಲ್ಲದಂತೆ ಇವರು ಕುಟುಂಬದ ಬೇಹುಗಾರಿಕೆ ನಡೆಸಿದ್ದಾರೆ. ಏಳು ಪ್ರಜೆ ತೊತ್ತಿರ ಕಾಹು ಎಂಬುದು ತೊತ್ತುಗಳು ಸಹ ಇಲ್ಲಿ ನಿಯಂತ್ರಣ ಹೇರುತ್ತಿರುವುದನ್ನು ಕಾಣಬಹುದು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪುರುಷ ಪ್ರಧಾನ ವ್ಯವಸ್ಥೆಯಾದರೂ ಸಹ ಹೆಣ್ಣು ಮತ್ತೊಂದು ಹೆಣ್ಣಿನ ಮೇಲೆ ಅಧಿಕಾರ ಚಲಾಯಿಸುವ ಮೂಲಕ ಹಿಡಿತದಲ್ಲಿಟ್ಟುಕೊಳ್ಳಲು ಪ್ರಯತ್ನಿಸುವ ಬಗೆ ಮುಖ್ಯವಾದುದು. ಆದರೂ ಇವೆಲ್ಲವನ್ನೂ ಮೀರಿ ನಿಲ್ಲುವ ಮನೋಭಾವ ಅಕ್ಕನದು. ಆದ್ದರಿಂದಲೇ ಅವಳು 'ಕರ್ಮವೆಂಬ ಗಂಡನ ಬಾಯ ಟೊಣೆದು ಹಾದರವನಾಡುವೆನು ಹರನ ಕೂಡೆ' ಎನ್ನುತ್ತಾಳೆ. 'ಹಾದರ' ಎಂಬ ಪದದ ಬಳಕೆ ಸಾಮಾಜಿಕ ಒಪ್ಪಿತ ಮೌಲ್ಯಗಳನ್ನು ಮೀರುವ ಬಗೆಯನ್ನು ತಿಳಿಸುತ್ತದೆ.

ಹೋದೆನೂರಿಗೆ ಇದ್ದೆ ನಾನಲ್ಲಿ
ಹೋದಡೆ ಮರಳಿತ್ತ ಬಾರೆನವ್ವಾ.
ಐವರು ಭಾವದಿರು ಐವರು ನಗೆವಣ್ಣು
ಈ ಐವರು ಕೂಡಿ ಎನ್ನ ಕಾಡುವರು
ಬೈದರು ಹೊಯ್ವರು ಮಿಗೆ ಕೇಡನುಡಿವರು
ಇವರೈವರ ಕಾಟಕ್ಕೆ ನಾನಿನ್ನಾರೆ ಕಂಡವ್ವಾ
ಅತ್ತೆ ಮಾವ ಮೈದುನ ನಗೆವೆಣ್ಣು,
ಚಿತ್ತವನೊರೆದು ನೋಡುವ ಗಂಡ.

೮. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೨

ಕತ್ತಲೆಯಾದಡೆ ಕರೆದನ್ನವ ನೀಡವ್ವಾ,
ಅತ್ತಿಗೆ ಹತ್ತೆಂಟು ನುಡಿವಳಮ್ಮಮ್ಮ ತಾಯೆ.
ಉಪಮಾತೀತ ಬಂಧು ಬಳಗಂಗಳು
ಶ್ರೀಶೈಲ ಚೆನ್ನಮಲ್ಲಿಕಾರ್ಜುನ ಒಲಿದಡೆ
ಮರಳಿ ಬಾರನಮ್ಮ ತಾಯೆ. ೯

ವಿಷಮ ಸಂಸಾರದ ಎಲ್ಲಾ ಲಕ್ಷಣಗಳನ್ನು ಇಲ್ಲಿ ಕಾಣಬಹುದು. ಕಾಯಬೇಕಾದವರು ಕಾಡುವ ಗುಣವನ್ನು ಹೊಂದಿದ್ದು ನಾನಾ ರೀತಿಯ ಹಿಂಸೆಗೆ ಕಾರಣರಾಗಿದ್ದಾರೆ. ಇಂತಹ ಸಂಸಾರದಿಂದ ಯಾವುದೇ ರೀತಿಯ ಸುಖ, ನೆಮ್ಮದಿ ಸಾಧ್ಯವಿಲ್ಲ ಎಂಬ ಭಾವ ಅಕ್ಕನದು. ನಂಬಿಕೆ, ಪ್ರೀತಿ, ವಿಶ್ವಾಸಗಳಿಂದ ಬೆಸೆಯಬೇಕಾದ ಸಂಬಂಧಗಳು ಅಪನಂಬಿಕೆ, ಅವಿಶ್ವಾಸ, ಕೇಡನ್ನುಂಟು ಮಾಡುವ ಮನೋಭಾವವನ್ನು ವ್ಯಕ್ತಪಡಿಸುತ್ತವೆ. ಇಂತಹ ಬಂಧು ಬಳಗ ಉಪಮೆಗೆ ಅತೀತವಾದವುಗಳಾಗಿದ್ದು, ಇದರಿಂದ ಬಿಡುಗಡೆ ಹೊಂದುವ ಮನೋಭಾವ ಅಕ್ಕನದು. ಅದಕ್ಕಾಗಿ ಅವಳು ಚೆನ್ನಮಲ್ಲಿಕಾರ್ಜುನನ ಮೊರೆ ಹೋಗುತ್ತಾಳೆ. ಒಮ್ಮೆ ಇಂತ ಸಂಸಾರದಿಂದ ಮುಕ್ತಿ ದೊರೆತರೆ ಮರಳಿ ಬರುವುದಿಲ್ಲ ಎಂಬ ದೃಢ ನಿರ್ಧಾರ ವ್ಯಕ್ತಪಡಿಸುತ್ತಾಳೆ.

ಸಂಸಾರವನ್ನು ಹಗರಣ ಎಂದು ಕರೆಯುವ ಅಕ್ಕ 'ಅಪ್ಪಾ ಬೊಪ್ಪ' ಎಂಬ ಮೋಹವು ಅದು ಮೊಟ್ಟ ಮೊದಲಲ್ಲಿ ಬಂದಾಗಿತ್ತು ಎಂದು ಪಿತೃ ಪ್ರಧಾನ ಕುಟುಂಬದ ನೇತಾರನಾದ ತಂದೆಯನ್ನು ಮೋಹದ ಮುಖವಾಡ ಎಂದು ಗುರುತಿಸುತ್ತಾಳೆ. ನಂತರದ ಹಂತದಲ್ಲಿ ದರ್ಪ, ದಬ್ಬಾಳಿಕೆ, ಅಹಂಮ್ಮಿಕೆಯ ಸಂಕೇತವಾದ ತಂದೆಯ ಪಾತ್ರವನ್ನು ವಿಮರ್ಶಿಸುತ್ತಾ ಇವರ ಹಿಡಿತದಿಂದ ಬಿಡುಗಡೆ ಹೊಂದಲು ಬಯಸುತ್ತಾಳೆ. ಕುಟುಂಬ ವ್ಯವಸ್ಥೆಯ ಮತ್ತೊಂದು ಪ್ರಮುಖ ಪಾತ್ರ ತಾಯಿಯದು. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಸಂಪೂರ್ಣ ಅವಗಣನೆಗೆ ಒಳಗಾಗಿರುವ ಅರಿವು ಅಕ್ಕನಿಗಿದೆ. ಈ ತಾಯಿಯ ಅಸಹಾಯಕ ಸ್ಥಿತಿಯನ್ನು ಅಕ್ಕ ಈ ರೀತಿ ವಿವರಿಸುತ್ತಾಳೆ.

ಬಂಜೆ ಬೇನೆಯರಿವಳೆ?
ಬಲದಾಯಿ ಮದ್ದ ಬಲ್ಲಳೆ?
ನೊಂದವರ ನೋವ ನೋಯದವರೆತ್ತ ಬಲ್ಲರೊ? ೧೦

ಎಂದು ತನ್ನ ನೋವನ್ನು ಅರಿತೋ, ಅರಿಯದೆಯೋ, ಸಹಾಯ ಮಾಡಲಾಗದ ತಾಯಿಯ ದುಸ್ಥಿತಿಯನ್ನು ವಿವರಿಸುತ್ತಾಳೆ. ಈ 'ಭುವನವನ್ನರಿಯಲು ಅಸಂಖ್ಯಾತರೆನಗೆ ತಂದೆ ತಾಯಿಗಳು' ಎನ್ನುವ ಅಕ್ಕ ಕುಟುಂಬ ವ್ಯವಸ್ಥೆಯ ತಂದೆ, ತಾಯಿ ಪರಿಕಲ್ಪನೆಯನ್ನು ಮೀರಿ ನಿಲ್ಲುತ್ತಾಳೆ. ಈ ಲೋಕದ ವ್ಯವಹಾರವನ್ನು ಅರಿತು ಅದರಿಂದ ಮುಕ್ತಿ ಪಡೆಯಲು ಸಹಾಕರಿಸಿದವರೆಲ್ಲರೂ ತಂದೆ ತಾಯಿಗಳು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾಳೆ.

---

೯. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೫೪

೧೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೩೭

ಸಂಸಾರ ಬಂಧನಕ್ಕೆ ಮೂಲಕಾರಣ ಗಂಡ - ಹೆಂಡತಿ ಸಂಬಂಧ. ಅಕ್ಕ ತನಗೆ ಈ ಸಂಬಂಧದ ಅವಶ್ಯಕತೆ ಇಲ್ಲವೆಂದು, ಲೌಕಿಕ ಸಂಸಾರದಿಂದ ವಿಮುಕ್ತನಾದ ಪಾರಮಾರ್ಥಿಕ ಗಂಡನ ಹುಡುಕಾಟಕ್ಕೆ ಮುಂದಾಗುತ್ತಾಳೆ.

**ಇಹಕ್ಕೊಬ್ಬ ಗಂಡನೆ ? ಪರಕ್ಕೊಬ್ಬ ಗಂಡನೆ ?**
**ಲೌಕಿಕಕ್ಕೊಬ್ಬ ಗಂಡನೆ ? ಪಾರಮಾರ್ಥಕ್ಕೊಬ್ಬ ಗಂಡನೆ ?**
**ಎನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ**
**ಮಿಕ್ಕಿದ ಗಂಡರೆಲ್ಲ ಮುಗಿಲ ಮರೆಯ ಬೊಂಬೆಯಂತೆ** [೧೧]

ಎಂದು ಲೋಕದ ಗಂಡನಿಗೂ, ತನಗೂ ಯಾವುದೇ ರೀತಿಯ ಸಂಬಂಧವಿಲ್ಲ, ಇಹ ಪರಗಳೆರಡಕ್ಕೂ ಒಡೆಯನಾದ ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡ ಎಂದು ಲೌಕಿಕ ಗಂಡನನ್ನು ನಿರಾಕರಿಸುತ್ತಾಳೆ. ''ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವ ತನ್ನ ಗಂಡನಾಗಬೇಕೆಂಬ ಬಯಕೆ ಅಕ್ಕನದು. ಅವನು 'ಉಭಯ ಸಿರಿವಂತ'ನಾಗಿದ್ದು ಗಂಡ ಗಂಡರನ್ನೆಲ್ಲ ಹೆಂಡಿರಾಗಿ ಕಾಡುವ ಗರುವನಾಗಿರಬೇಕು ತನ್ನ ಗಂಡ ಎಂದು ಹೇಳುವ ಮೂಲಕ ಶಕ್ತಿ, ಸಾಮರ್ಥ್ಯ, ಶಾಶ್ವತೆಯ ಪ್ರತೀಕವಾಗಿರುವ ಗಂಡನನ್ನು ಬಯಸುತ್ತಾಳೆ. ಇಂತಹ ಗಂಡ ಲೌಕಿಕದಲ್ಲಿ ದೊರೆಯಲು ಸಾಧ್ಯವಿಲ್ಲವೆಂಬ ದೃಢ ನಿರ್ಧಾರದಿಂದಲೇ ಅವಳು ಪಾರಮಾರ್ಥಿಕ ಗಂಡನ ಮೊರೆ ಹೋಗುತ್ತಾಳೆ. ಪಾರಮಾರ್ಥಿಕ ಮಾದರಿ ಗಂಡನ ಬಯಕೆಯಲ್ಲಿ ಲೌಕಿಕ ಗಂಡನ ಪ್ರಸ್ತುತತೆಯನ್ನು ನಿರಾಕರಿಸುತ್ತಾಳೆ.

## ಸಾಂಸಾರಿಕ ಮೌಲ್ಯಗಳಾದ ಮದುವೆ, ನೈತಿಕತೆ, ದಾಂಪತ್ಯದ ತಿರಸ್ಕಾರ

ಸಂಸಾರವನು ಹಗೆಯೆಂದು ಕರೆಯುವ ಅಕ್ಕ ಈ ಸಂಸಾರದಿಂದ ಬಿಡುಗಡೆ ಹೊಂದಬೇಕೆಂದು ಬಯಸಿದಷ್ಟು ಅದು ಬೆಂಬಿಡದೆ ಕಾಡುತ್ತಿರುವ ಬಗೆಯನ್ನು ವಿವರಿಸುತ್ತಾಳೆ. ಈ ಸಂಬಂಧಗಳು ಬಯಸಿಯೂ, ಬಯಸದೆಯೂ ಒಂದಕ್ಕೊಂದು ಹೆಣೆದುಕೊಂಡು ಬಲೆಯ ರೀತಿಯಲ್ಲಿ ಸೆರೆ ಹಿಡಿದಿವೆ. ವಿವಾಹವೇ ಸಂಸಾರ ಸಂಬಂಧಕ್ಕೆ ಅಡಿಪಾಯವಾಗಿರುವ ಕಾರಣ ಗಂಡ, ಅತ್ತೆ, ಮಾವ, ಮಗ ಎಂಬ ಸಂಬಂಧಗಳು ಏರ್ಪಡುತ್ತವೆ. ಆದ್ದರಿಂದ ಈ ಸಂಸಾರವನ್ನು ತ್ಯಜಿಸಬೇಕೆಂದರೆ ವಿವಾಹ ಬಂಧನದಿಂದ ಮುಕ್ತರಾಗಿರಬೇಕು. ಅದರ ತೀವ್ರ ಹಂಬಲ ಅಕ್ಕನ ವಚನಗಳಲ್ಲಿ ವ್ಯಕ್ತವಾಗುತ್ತವೆ. ಅಲ್ಲದೆ ಈ ವಚನಗಳಲ್ಲಿ ಅಕ್ಕ ಹಾಗೂ ಚೆನ್ನಮಲ್ಲಿಕಾರ್ಜುನನ ನಡುವೆ ನಡೆಯುವ ಮದುವೆಯ ಚಿತ್ರಣ ಸ್ಪಷ್ಟವಾಗಿ ಮೂಡಿಬರುತ್ತದೆ. ಇವರ ಮದುವೆ ಒಂದು ರೀತಿಯಲ್ಲಿ ವೈಶಿಷ್ಟ್ಯಪೂರ್ಣವಾದುದ್ದಾಗಿದೆ. ಏಕೆಂದರೆ ಈ ಮದುವೆ ನಡೆಯುವುದು ಎರಡು ವ್ಯಕ್ತಿಗಳ ನಡುವೆ ಅಲ್ಲ, ಎರಡು ಮಹಾನ್ ವ್ಯಕ್ತಿತ್ವಗಳ ನಡುವೆ. ಚೆನ್ನಮಲ್ಲಿಕಾರ್ಜುನ ಎಲ್ಲವನ್ನೂ ಗೆದ್ದ ಮಹಾನ್ ಧೀರನಾದರೆ ಅಕ್ಕ ಅವನನ್ನೇ ತನ್ನೊಳಗಡಗಿಸಿಕೊಳ್ಳುವ ಸಾಮರ್ಥ್ಯವುಳ್ಳವಳು. ಆದುದರಿಂದಲೇ ಅಕ್ಕ ಹೇಳುವ ವಿವಾಹದ ಕಲ್ಪನೆ ವಿಶಿಷ್ಟ ರೀತಿಯದ್ದಾಗಿದೆ.

---

೧೧.ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೬೫

ಪಚ್ಚೆಯ ನೆಲೆಗಟ್ಟು, ಕನಕದ ತೋರಣ, ವಜ್ರದ ಕಂಬ,
ಪವಳದ ಚಪ್ಪರವಿಕ್ಕಿ, ಮುತ್ತು ಮಾಣಿಕದ ಮೇಲುಕಟ್ಟು ಕಟ್ಟಿ
ಮದುವೆಯ ಮಾಡಿದರು, ಎಮ್ಮವರೆನ್ನ ಮದುವೆಯ ಮಾಡಿದರು
ಕಂಕಣ ಕೈಧಾರೆ ಸ್ಥಿರ ಸೀಸೆಯನಿಕ್ಕಿ,
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು ೧೨

ಎಂದು ಭವ್ಯವಾದ ವಿವಾಹದ ಕಲ್ಪನೆಯನ್ನೇ ಕಟ್ಟಿಕೊಡುತ್ತಾಳೆ. ಇಲ್ಲಿ ಮದುವೆಗೆ ಬಳಸುವ ಯಾವ ವಸ್ತುವೂ ಕೂಡ ಸಾಮಾನ್ಯವಾದುದ್ದಲ್ಲ. ಎಲ್ಲಾ ಹೆಚ್ಚು ಬೆಲೆಬಾಳುವ, ಮೌಲ್ಯಯುತವಾದ ವಸ್ತುಗಳು. ಇಂತಹ ವಸ್ತುಗಳನ್ನು ಬಳಸಿ ಲೌಕಿಕದಲ್ಲಿ ಮದುವೆಯಾಗುವುದು ಅಸಾಧ್ಯ. ಆದುದರಿಂದ ಅಕ್ಕ ಲೌಕಿಕದಲ್ಲಿ ಸಾಧ್ಯವಾಗದ ಇಂಥ ಭವ್ಯ ವಿವಾಹವನ್ನು ಪಾರಮಾರ್ಥಿಕ ನೆಲೆಯಲ್ಲಿ ಸಾಧ್ಯವಾಗಿಸಿಕೊಳ್ಳಲು ಬಯಸುತ್ತಾಳೆ. ಅಕ್ಕ ತನ್ನ ಮತ್ತೊಂದು ವಚನದಲ್ಲಿ ಸಾಮಾನ್ಯ ಹಾಗೂ ಅತ್ಯಂತ ಸರಳ ರೀತಿಯ ವಿವಾಹವನ್ನು ಕುರಿತು ಹೇಳುತ್ತಾಳೆ.

ಗುರುಪಾದತೀರ್ಥವೆ ಮಂಗಳ ಮಜ್ಜನವೆನಗೆ
ವಿಭೂತಿಯೆ ಒಳಗುಂದರಿಷಿಣವೆನಗೆ.
ದಿಗಂಬರವೆ ದಿವ್ಯಾಂಬರವೆನಗೆ.
ಶಿವಭಕ್ತರ ಪಾದರೇಣುವೆ ಅನುಲೇಪನವೆನಗೆ.
ರುದ್ರಾಕ್ಷಿಯೆ ಮೈದುಡುಗೆಯೆನಗೆ.
ಬೇರೆ ಶೃಂಗಾರವೇಕೆ ಹೇಳಿರೆ ಅವ್ವಗಳಿರಾ ೧೩

ಮದುವೆ ಮನೆಯ ಶೃಂಗಾರವನ್ನು ಅತ್ಯಂತ ವೈಭವಯುತವಾಗಿ ವರ್ಣಿಸಿದ ಅಕ್ಕ ಮದುಮಗಳ ಶೃಂಗರದ ವಿಷಯ ಬಂದಾಗ ಸರಳವಾದ ಮದುವೆಯ ಚಿತ್ರಣವನ್ನು ನೀಡುತ್ತಾಳೆ. ಗುರುಪಾದ ತೀರ್ಥ, ವಿಭೂತಿ, ರುದ್ರಾಕ್ಷಿ ಇವೆ. ಒಡವೆ ವಸ್ತುಗಳಾಗಿರುವ ಬಗೆಯನ್ನು ತಿಳಿಸುತ್ತಾಳೆ.

ವಿವಾಹ ಗುರು ಹಿರಿಯರಿಂದ ನಿಶ್ಚಯಿಸಲ್ಪಡುವುದು ಸಾಮಾನ್ಯವಾದ ಸಂಗತಿ. ಆದರೆ ಅಕ್ಕ ತಾನು ಮದುವೆಯಾಗ ಬಯಸುವ ಗಂಡ, ಮದುವೆಯ ವಿಧಿ ವಿಧಾನ ಎಲ್ಲವನ್ನೂ ಸಹ ತಾನೇ ನಿರ್ಧರಿಸುತ್ತಾಳೆ. ತನ್ನಿನಿಯನನ್ನು ತಾನೇ ಆರಿಸಿಕೊಂಡ ಅಕ್ಕ ಅವನ ಒಪ್ಪಿಗೆಗಾಗಿ ಹಾತೊರೆಯುತ್ತಾಳೆ. ಗಂಡಿನ ನಿರ್ಧಾರವೇ ಅಂತಿಮ ಎಂಬ ಸಂದರ್ಭದಲ್ಲಿ ಅಕ್ಕ ತನ್ನ ಜೀವನದ ಬಗೆಗೆ ಸ್ವತಂತ್ರ ನಿರ್ಧಾರ ತೆಗೆದುಕೊಳ್ಳಲು ಮುಂದಾಗುತ್ತಾಳೆ.

---

೧೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೨೬

೧೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೬೩

ಅರಿಸಿನವನೆ ಮಿಂದು, ಹೊಂದೊಡಿಗೆಯನೆ ತೊಟ್ಟು,
ದೇವಾಂಗನುಟ್ಟೆನೆಲೆ ಪುರುಷ ಬಾರಾ,
ಪುರುಷ ರತ್ನವೆ ಬಾರಾ.
ನಿನ್ನ ಬರವನ್ನ ಅಸುವಿನ ಬರವಾದುದೀಗ ,
ಬಾರಯ್ಯಾ ಚೆನ್ನಮಲ್ಲಿಕಾರ್ಜುನಯಾ.
ನೀನು ಬಂದಹನೆಂದು ಬಟ್ಟೆಯ ನೋಡಿ ಬಾಯಾರುತಿರ್ದೆನು ೧೪

ಎಂದು ಪರಿತಪಿಸುತ್ತಾಳೆ. ಮದುವಣಗಿತ್ತಿಯಾದ ಅಕ್ಕ ಮದುವಳಿಗನಾದ ಚೆನ್ನಮಲ್ಲಿಕಾರ್ಜುನನಿಗಾಗಿ ಹಂಬಲಿಸುತ್ತಾಳೆ.

ಗುರುವೆ ತೆತ್ತಿಗನಾದ,
ಲಿಂಗವೆ ಮದುವಣಿಗನಾದ, ನಾನೆ ಮದುವಳಿಗೆಯಾದೆನು
ಈ ಭುವನವೆಲ್ಲರಿಯಲು ಅಸಂಖ್ಯಾತರೆನಗೆ ತಾಯಿ ತಂದೆಗಳು
ಕೊಟ್ಟರು ಸಾದೃಶ್ಯವಪ್ಪ ವರನ ನೋಡಿ
ಇದು ಕಾರಣ, ಚೆನ್ನಮಲ್ಲಿಕಾರ್ಜುನನೆ ಗಂಡನೆನಗೆ
ಮಿಕ್ಕಿನ ಲೋಕದವರೆನಗೆ ಸಂಬಂಧವಿಲ್ಲವಯ್ಯಾ ಪ್ರಭುವೆ ೧೫

ಎಂದು ಸಾಂಪ್ರದಾಯಿಕ ಮದುವೆಯ ಚೌಕಟ್ಟನ್ನು ಒಡೆಯಲು ಪ್ರಯತ್ನಿಸುತ್ತಾಳೆ. ಇಲ್ಲಿರುವ ವರ ತನ್ನ ಅಂತಃಸಾಕ್ಷಿಯ ಪ್ರತಿಬಿಂಬವಾದ ಲಿಂಗ. ಈ ಲಿಂಗ ಜಗತ್ತಿನ ಚೈತನ್ಯದ ಸಂಕೇತ. ಸಕಲ ಜೀವಿಗಳ ಕುರುಹಿನ ಸ್ವರೂಪ. ಇದರಲ್ಲಿ ಒಂದಾಗುವ ಬಯಕೆ ಅಕ್ಕನದು. ಇಂತಹ ಸಾದೃಶ್ಯವವಪ್ಪವರನೊಂದಿಗಿನ ವಿವಾಹ ಅಲೌಕಿಕ ಸಂಬಂಧದಿಂದಲ್ಲದೆ ಲೌಕಿಕ ಸಂಬಂಧದಿಂದ ಏರ್ಪಡಲು ಸಾಧ್ಯವಿಲ್ಲ. ಈ ರೀತಿಯಲ್ಲಿ ಏರ್ಪಡುವ ಬಾಂಧವ್ಯದಿಂದ ಬಿಡುಗಡೆ ಎಂಬುದೇ ಇಲ್ಲ.

ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ
ಆಲಿಕಲ್ಲ ಹಸೆಯ ಹಾಸಿ ಬಾಸಿಗವ ಕಟ್ಟಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ
ಮದುವೆ ಮಾಡಿದರೆಲೆ ಅವ್ವಗಳಿರಾ ೧೬

---

೧೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೮

೧೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೬೬

೧೬. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೭೬

ಎಂದು ಅಸಾಧ್ಯವಾದುದ್ದನ್ನು ಸಾಧ್ಯವಾಗಿಸುವ ಬಗೆಯನ್ನು ಕಾಣಬಹುದು. ಜಲದ ಮಂಟಪ, ಉರಿಯ ಚಪ್ಪರ, ಆಲಿಕಲ್ಲ ಹಸೆ ಇವುಗಳನ್ನು ಭ್ರಮಿಸಿ ನೋಡಲು ಸಾಧ್ಯವೇ ವಿನಃ ಬಿಡಿಸಿ ನೋಡಲು ಸಾಧ್ಯವಿಲ್ಲ. ಅಂತೆಯೇ ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಮದುವೆಯಾಗುವುದು ಅಸಾಧ್ಯ. ಆದರೆ ಕಾಲು, ತಲೆ ಎರಡೂ ಒಂದಾದಾಗ ಒಂದು ಪರಿಪೂರ್ಣ ವ್ಯಕ್ತಿತ್ವ ನಿರ್ಮಾಣವಾಗುತ್ತದೆ.

ಮದುವೆ ವ್ಯಕ್ತಿಯ ಪ್ರಬುದ್ಧತೆ ಪರಿಪೂರ್ಣತೆಯ ದ್ಯೋತಕ. ಈ ರೀತಿಯ ಬಾಳುವೆಗೆ ಮುಂದಾದಾಗ ಬಿಟ್ಟುಬಾಳುವ ಪ್ರಶ್ನೆಯೇ ಬರುವುದಿಲ್ಲ. ಅದು ನಿತ್ಯ ನಿರಂತರ, ಶಾಶ್ವತವಾದ ಮದುವೆ ಇದನ್ನು ಗಮನಿಸಿದಾಗ ಅಕ್ಕ ಮದುವೆಗೆ ವಿಶಾಲವಾದ, ವಿಶೇಷವಾದ ಅರ್ಥವನ್ನು ನೀಡಿರುವುದು ಗೋಚರವಾಗುತ್ತದೆ. ''ನಾನು ನಿನಗೊಲಿವೆ, ನೀನು ನನಗೊಲಿವೆ, ನೀ ನೆನ್ನನಗಲದಿಪ್ಪ, ನಾ ನಿನ್ನ ನಗಲದಿಪ್ಪನಯ್ಯಾ, ನಿನಗೆ ನನಗೆ ಬೇರೊಂದು ಠಾವುಂಟೆ?'' ಎಂದು ಹೇಳಿರುವುದು ಗಂಡು ಹೆಣ್ಣಿನೊಳಗೆ, ಹೆಣ್ಣು ಗಂಡಿನೊಳಗೆ ಬೆರೆತು ಬೇರಾಗದ, ಒಬ್ಬರಿಂದ ಮತ್ತೊಬ್ಬರನ್ನು ಗುರುತಿಸುವ ಬಗೆಯನ್ನು ತಿಳಿಸುತ್ತವೆ. ಅಂದರೆ ಹೆಣ್ಣಿನೊಳಗೆ ಗಂಡಸುತನವನ್ನೂ, ಗಂಡಿನೊಳಗೆ ಹೆಂಗಸುತನವನ್ನೂ ಗುರುತಿಸುವ ಅಕ್ಕ, ವಿವಾಹ ಸಂಬಂಧದ ಮೂಲಕ ಪರಿಪೂರ್ಣ ವ್ಯಕ್ತಿತ್ವದ ಸಿದ್ಧಿಗೆ ಮುಂದಾಗುತ್ತಾಳೆ. ಪ್ರಚಲಿತದಲ್ಲಿದ್ದ ಹೆಣ್ಣು ಗಂಡಿನ ಆಶ್ರಯದಲ್ಲಿಯೇ ಇರಬೇಕೆಂಬ ನಿಯಮವನ್ನು ಮೀರಿ ತನ್ನಲೇ ಗಂಡಿನ ಅಸ್ತಿತ್ವವನ್ನೇ ರೂಪಿಸಿಕೊಳ್ಳಲು ಮುಂದಾಗುತ್ತಾಳೆ.

ದೇಹದ ಬಗೆಗೆ ವ್ಯಾಮೋಹವನ್ನು ತೊರೆದು ದಾಂಪತ್ಯ ಸುಖದ ಬಗೆಗೆ ನಿರಾಸಕ್ತಿಯನ್ನು ವ್ಯಕ್ತಪಡಿಸುತ್ತಾ ಎನ್ನ ಕಾಯ ಮಣ್ಣು ಜೀವ ಬಯಲು ಯಾವುದ ಹಿಡಿಯಲಿ ಎಂದು ಮಾರ್ಮಿಕವಾಗಿ ಹೇಳುವ ಅಕ್ಕ ದಾಂಪತ್ಯ ಸುಖಕ್ಕೆ ಕಾರಣವಾದ ಆಕರ್ಷಣೀಯ ದೇಹವನ್ನು

**ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ**
**ಎಲುವಿನ ತಡಿಕೆ, ಕೀವಿನ ಹಡಿಕೆ**
**ಸುಡಲೀ ದೇಹವ ; ಒಡಲುವಿಡಿದು ಕೆಡದಿರು**
**ಚೆನ್ನಮಲ್ಲಿಕಾರ್ಜುನನರಿಯದ ಮರುಳೆ** ೧೭

ಎಂದು ದೇಹದ ಬಗೆಗಿನ ವ್ಯಾಮೋಹವನ್ನು ಅಲ್ಲಗಳೆಯುತ್ತಾಳೆ. ಇಂತಹ ದೈಹಿಕ ಆಕರ್ಷಣೆಯಿಂದ ಕೂಡಿದ ದಾಂಪತ್ಯದ ಬಗೆಗೆ ತಿರಸ್ಕಾರ ಮನೋಭಾವ ಅವಳದು.

ಕುಟುಂಬ ವ್ಯವಸ್ಥೆಯ ಪ್ರಮುಕ ಮೌಲ್ಯಗಳಾದ ಶೀಲ, ನೈತಿಕತೆಯ ಬಗ್ಗೆ ಅಕ್ಕ ತಲೆಕೆಡಿಸಿಕೊಂಡವಳಲ್ಲ. ತನ್ನಿನಿಯನೊಂದಿಗೆ ಏರ್ಪಡುವ ಸಂಬಂಧ ಯಾವುದೇ ರೀತಿಯದ್ದಾಗಿರಲಿ ಅದನ್ನು ಸ್ವೀಕರಿಸುವ ಮುಂದುವರಿಸುವ ಮನೋಭಾವ ಅವಳದು.

**ಕರ್ಮವೆಂಬ ಗಂಡನ ಬಾಯ ಟೊಣೆದು**
**ಹಾದರವನಾಡುವೆನು ಹರನ ಕೂಡೆ** ೧೮

ಎಂದು ಚೆನ್ನಮಲ್ಲಿಕಾರ್ಜುನನೊಂದಿಗಿನ ಸಂಬಂಧ ಕೌಟುಂಬಿಕ ಸಂಬಂಧಕ್ಕಿಂತ ವ್ಯತಿರಿಕ್ತವಾದ ಅನೈತಿಕ ಸಂಬಂಧ.

---

೧೭. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೭

೧೮. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೩

ಹರನ ನಡುವೆ ಅವಳು ಮಾಡುತ್ತಿರುವುದು ಸಂಸಾರವನ್ನಲ್ಲ ಹಾದರವನ್ನು. ಇಂತ ಸಂಬಂಧ ಅಕ್ಕನಿಗಲ್ಲದೆ ಬೇರೆಯವರಿಗೆ ಸಾಧ್ಯವಿಲ್ಲ. ಸಾಮಾಜಿಕ ಒಪ್ಪಿತವಾದ ಸಂಸಾರ ಬಂಧನವನ್ನು ಮುರಿದು ತನ್ನದೇ ಆದ ರೀತಿಯಲ್ಲಿ ಅದನ್ನು ರೂಪಿಸಿಕೊಳ್ಳುವ ಪ್ರಯತ್ನ ಮಾಡಿದ್ದಾಳೆ. ಅದರ ಪ್ರತೀಕವಾಗಿ 'ಹಾದರ' ಎಂಬ ಪದ ಬಳಕೆಯಾಗಿವೆ. ಅಲೌಕಿಕವಾದ ಸಂಬಂಧವನ್ನು ಅನೈತಿಕ ಎಂದು ಕರೆಯಲು ಕಾರಣವೇನು ಎಂಬುದಕ್ಕೆ ಉತ್ತರಿಸುತ್ತಾ

**ಒಳಗಣ ಗಂಡನಯ್ಯಾ, ಹೊರಗಣ ಮಿಂಡನಯ್ಯಾ.**
**ಎರಡನೂ ನಡೆಸಲು ಬಾರದಯ್ಯಾ.**
**ಲೌಕಿಕ ಪಾರಮಾರ್ಥವೆಂಬೆರಡನೂ ನಡೆಸಲು ಬಾರದಯ್ಯಾ** ೧೯

ಎಂದು ತನ್ನ ಅಂತರಂಗದ ಗಂಡನಾಗಿರುವವನು ಲೋಕದ ಕಣ್ಣಿಗೆ ಮಿಂಡನಾಗಿ ಕಾಣುತ್ತಾನೆ. ಆದುದರಿಂದ ಹರನೊಂದಿಗಿನ ಸಂಬಂದ ಲೋಕದ ಕಣ್ಣಿಗೆ 'ಹಾದರ'. ಅದೇನೇ ಆದರೂ ಸಹ ಅಕ್ಕನಿಗೆ ಈ ಸಂಬಂಧದೊಂದಿಗೆ ಮುಂದುವರಿಯಲು ಹೆಚ್ಚು ಆಸಕ್ತಿ. ಆದುದರಿಂದಲೇ ಅವಳು ಚೆನ್ನಮಲ್ಲಿಕಾರ್ಜುನನನ್ನು ಕನಸಿನಲ್ಲಿ ಕಂಡರೂ ಕೂಡ ಮಿಕ್ಕು ಮೀರಿ ಹೋಗಿ ಕೈ ಹಿಡಿಯುವುದು.

ಈ ರೀತಿ ಅಕ್ಕ ಲೌಕಿಕ ಸಂಸಾರದ ಸೋಂಕಿನಿಂದ ಕೂಡಿದ ಎಲ್ಲಾ ಸಂಬಂಧಗಳನ್ನು ನಿರಾಕರಿಸುತ್ತಾ ಆಧ್ಯಾತ್ಮದ ನೆಲೆಯುಳ್ಳ ಸಂಸಾರದ ಬಗೆಗೆ ಹೆಚ್ಚಿನ ಆಸಕ್ತಿಯನ್ನು ತೋರುತ್ತಾಳೆ. ತನ್ನದೇ ಆದ ಆದರ್ಶ ಸಂಸಾರದ ನಿರ್ಮಾಣಕ್ಕೆ ಮುಂದಾಗುತ್ತಾಳೆ. ಈ ಸಂದರ್ಭದಲ್ಲಿ ಉಂಟಾದ ಅನೇಕ ರೀತಿಯ ಅಡ್ಡಿ ಆತಂಕಗಳಿಗೆ ಹೆದರದೆ ಪಾರಮಾರ್ಥಿಕ ಸಂಸಾರದಲ್ಲಿ ತನ್ನ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಇಂಗಿತವನ್ನು ವ್ಯಕ್ತಪಡಿಸುತ್ತಾಳೆ.

## ಶಾಶ್ವತವಾದ ಪಾರಮಾರ್ಥಿಕ ದೃಷ್ಟಿಯುಳ್ಳ ಸಂಸಾರ ಅನ್ಯೋನ್ಯ ದಾಂಪತ್ಯದ ಸ್ವೀಕಾರ ಹಾಗೂ ಹಂಬಲ

ಹಿಂದಿನ ಅಧ್ಯಾಯದಲ್ಲಿ ಅಕ್ಕ ಲೌಕಿಕ ಸಂಸಾರ, ಅದಕ್ಕೆ ಕಾರಣವಾದ ವ್ಯಕ್ತಿಗತ ಸಂಬಂಧ ಹಾಗೂ ಮೌಲ್ಯಗಳ ನಿರಾಕರಣೆಯ ಮೂಲಕ ತನ್ನ ಸ್ವಾತಂತ್ರ್ಯದ ಹಂಬಲವನ್ನು ವ್ಯಕ್ತಪಡಿಸಿದ ಬಗ್ಗೆ ವಿವರಿಸಲಾಗಿದೆ. ಲೌಕಿಕ ಸಂಸಾರದ ಮೌಲ್ಯಹೀನತೆ ಮತ್ತು ವ್ಯಕ್ತಿಗತ ಸಂಬಂಧಗಳು ಅರ್ಥ ಕಳೆದುಕೊಂಡ ಸಂದರ್ಭದಲ್ಲಿ ಅಕ್ಕ ತನ್ನದೇ ಆದ ಪಾರಮಾರ್ಥಿಕ ಸಂಸಾರವೊಂದರ ಪರಿಕಲ್ಪನೆಗೆ ರೂವಾರಿಯಾಗುತ್ತಾಳೆ. ಚಿಕ್ಕಂದಿನಿಂದಲೂ ದೈವದ ಬಗೆಗೆ ಅಪಾರವಾದ ಭಕ್ತಿಯನ್ನು ಹೊಂದಿದ್ದ ಅಕ್ಕ ಎಳತನದಲ್ಲಿ ಕೇಳಿದ ಕಥೆ ಕೀರ್ತನೆಗಳ ಪ್ರಭಾವದಿಂದಲೋ, ಸಂಸ್ಕಾರ ಸಿದ್ದಿಯಿಂದಲೋ ಅಥವಾ ದೈವ ಪ್ರೇರಣೆಯಿಂದಲೋ ಚೆನ್ನಮಲ್ಲಿಕಾರ್ಜುನನೇ ತನ್ನ ಗಂಡ ಎಂದು ಅವನನ್ನು ಕೂಡುವ ತೀವ್ರ ಹಂಬಲ ವ್ಯಕ್ತಪಡಿಸುತ್ತಾಳೆ. ಪ್ರಭುತ್ವದ ಪ್ರಭಾವದಿಂದ ಕೌಶಿಕನ ಬಲೆಗೆ ಬಿದ್ದ ಅಕ್ಕ ಕೆಲವು ಷರತ್ತುಗಳನ್ನು ವಿಧಿಸುವುದರ ಮೂಲಕ ಅದರಿಂದ ಬಿಡುಗಡೆ ಪಡೆಯಲು ಪ್ರಯತ್ನಿಸುತ್ತಾಳೆ. ಸ್ವಾತಂತ್ರಾಪೇಕ್ಷೆಯುಳ್ಳವಳೂ, ಪಾರಮಾರ್ಥಿಕ ದೃಷ್ಟಿಯುಳ್ಳವಳೂ ಆದ ಅಕ್ಕ ಪ್ರಭುತ್ವ ಭೋಗಾಸಕ್ತಿಯುಳ್ಳ ಕೌಶಿಕನೊಂದಿಗೆ ಬಹುಬೇಗ ಸಂಬಂಧ ಕಳಚಿಕೊಂಡು ತನ್ನ ಜೀವನದ ಬಹುದೊಡ್ಡ ಹಂಬಲ, ಸಿದ್ಧಿಯಾದ ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತಾ ಹೊರಟುಬಿಡುತ್ತಾಳೆ. ಈ ರೀತಿ ಹುಟ್ಟಿನಿಂದಲೇ ಲೌಕಿಕ

---

೧೯. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ. ವಚನ ಸಂ. ೧೦೫

ಸಂಸಾರದ ಬಗೆಗೆ ತಿರಸ್ಕಾರವನ್ನು ಬೆಳೆಸಿಕೊಂಡು ಬಂದ ಅಕ್ಕ ಲೌಕಿಕ ಸಂಸಾರದ ರುಚಿಯನ್ನು ಒಲ್ಲದ ಮನಸ್ಸಿನಿಂದ ಅನುಭವಿಸಿ, ಅದರ ಬಗೆಗೆ ಮತ್ತಷ್ಟೂ ತಿರಸ್ಕಾರ ಹೊಂದುತ್ತಾಳೆ. ಅಲ್ಲಿ ಇರಲಾರದೆ, ಎಲ್ಲಾ ವಿರೋಧಗಳನ್ನು ಎದುರು ಹಾಕಿಕೊಂಡು ಹೊರಬರುತ್ತಾಳೆ. ಇಷ್ಟಾದರೂ ಸಂಸಾರ ತನ್ನನ್ನು ಬೆಂಬಿಡದೆ ಕಾಡಿದಾಗ ತಾನು ಇನ್ನೇನು ಮಾಡಲಿ ಎಂದು ಹುಲುಬುತ್ತಾ ಚೆನ್ನಮಲ್ಲಿಕಾರ್ಜುನನಲ್ಲಿ ಮೊರೆಯಿಡುತ್ತಾಳೆ.

ಕಲ್ಲ ಹೊಕ್ಕಡೆ ಕಲ್ಲ ಬರಿಸಿದೆ,
ಗಿರಿಯ ಹೊಕ್ಕಡೆ ಗಿರಿಯ ಬರಿಸಿದೆ.
ಬಾಪು ಸಂಸಾರವೇ, ಬೆನ್ನಿಂದ ಬೆನ್ನುಹತ್ತಿ ಬಂದೆ.
ಚೆನ್ನಮಲ್ಲಿಕಾರ್ಜುನ ಇನ್ನೇವೆನಿನ್ನೇವೆ [೨೦]

ಎಂದು ಬೆಂಬಿಡದೆ ಕಾಡುತ್ತಿರುವ ಲೌಕಿಕ ಸಂಸಾರದಿಂದ ಬಿಡುಗಡೆಗಾಗಿ ತನ್ನಿನಿಯ ಮಲ್ಲಿಕಾರ್ಜುನನಲ್ಲಿ ಮೊರೆಯಿಡುತ್ತಾಳೆ. ಈ ಲೌಕಿಕ ಸಂಸಾರದಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಿದಾಗ ಮಾತ್ರ ಪಾರಮಾರ್ಥಿಕ ಸಂಸಾರದ ಸುಖವನ್ನು ಪಡೆಯಲು ಸಾಧ್ಯ ಎಂಬ ನಂಬಿಕೆ ಅಕ್ಕನದು. ಆದುದರಿಂದಲೇ ಅವಳು ಲೌಕಿಕ ಸಂಸಾರದ ಸಂಬಂಧಗಳ ಅರ್ಥಹೀನತೆಯನ್ನು ವಿವರಿಸುವುದರ ಜೊತೆ ಜೊತೆಯಲ್ಲಿಯೇ ಅದಕ್ಕೆ ಪರ್ಯಾಯ ಸಂಸಾರವೊಂದರ ಸ್ವರೂಪವನ್ನು ಕಟ್ಟಿಕೊಡುತ್ತಾಳೆ.

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ
ಬೆಳೆದೆನು ಅಸಂಖ್ಯಾತರ ಕರುಣದೊಳಗೆ
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ
ಪರಮಾರ್ಥವೆಂಬ ಸಕ್ಕರೆಯನಿಕ್ಕಿದರು ನೋಡಾ
ಇಂತಪ್ಪ ತ್ರಿವಿಧಾಮೃತವನ್ನು ದಣಿಯಲೆರೆದು ಸಲಹಿದಿರೆನ್ನ
ವಿವಾಹವ ಮಾಡಿದಿರಿ, ಸಯವಪ್ಪ ಗಂಡಂಗೆ ಕೊಟ್ಟಿರಿ
ಕೊಟ್ಟ ಮನೆಗೆ ಕಳುಹಲೆಂದು
ಅಸಂಖ್ಯಾತರೆಲ್ಲರೂ ನೆರೆದು ಬಂದಿರಿ
ಬಸವಣ್ಣ ಮುಚ್ಚಲು ಒಗೆತನವ ಮಾಡುವೆ
ಚೆನ್ನಮಲ್ಲಿಕಾರ್ಜುನನ ಕೈವಿಡಿದು
ನಿಮ್ಮ ತಲೆಗೆ ಹೂವ ತಹೆನಲ್ಲವೆ ಹುಲ್ಲತಾರೆನು
ಅವಧರಿಸಿ ನಿಮ್ಮಡಿಗಳೆಲ್ಲರೂ
ಮರಳಿ ಬಿರ್ಝುಂಗೈಯುವುದು ಶರಣಾರ್ಥಿ [೨೧]

೨೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೨೧

೨೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೪೬

ಅಕ್ಕ ತನ್ನ ಹುಟ್ಟು ಬೆಳೆದ ರೀತಿ, ಮದುವೆಯಾದ ಬಗೆಯನ್ನು ಈ ವಚನದಲ್ಲಿ ವಿವರಿಸುತ್ತಾಳೆ. ತಾಯಿಯಿಂದ ಪಡೆದ ಜೀವದ ಹುಟ್ಟಿಗಿಂತ ಗುರುವಿನಿಂದ ಪಡೆದ ಆಧ್ಯಾತ್ಮ ಸಂಸ್ಕಾರದ ಹುಟ್ಟು ಅವಳಿಗೆ ಹೆಚ್ಚು ಮಹತ್ವವಾಗಿ ಕಾಣುತ್ತದೆ. ''ಈ ಭುವನವನ್ನರಿಯಲು ಅಸಂಖ್ಯಾತರೆನಗೆ ತಂದೆತಾಯಿಗಳು'' ಎನ್ನುವ ಅಕ್ಕ ತನ್ನ ಬೆಳವಣಿಗೆ ಕೂಡ ಅಸಂಖ್ಯಾತರ ಕರುಣೆಯಿಂದಾದದ್ದು ಎನ್ನುತ್ತಾಳೆ. ಲೌಕಿಕ ಸಂಸಾರದಲ್ಲಿರುವ ಕಹಿ, ವಿಷ, ಹಾಲಾಹಲ ಇಲ್ಲಿಲ್ಲ. ಭಾವ, ಸುಜ್ಞಾನ, ಪಾರಮಾರ್ಥದ ಸವಿಯನ್ನುಂಡು ಬೆಳೆದ ಅಕ್ಕ ತನಗೆ ಸರಿಯಾದ ವರನನ್ನೇ ವಿವಾಹವಾಗುತ್ತಾಳೆ. ಅಷ್ಟೇ ಅಲ್ಲದೆ ಎಲ್ಲರೂ ಮೆಚ್ಚುವ ರೀತಿಯಲ್ಲಿ ಸಂಸಾರವನ್ನು ಮಾಡುತ್ತೇನೆ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾಳೆ. ಈ ರೀತಿ ಮಾದರಿ ಸಂಸಾರವನ್ನು ನಡೆಸಲು ಎಂತಹ ಗಂಡನಿಂದ ಸಾಧ್ಯ? ಎಂಬ ಪ್ರಶ್ನೆ ಬಂದಾಗ ಅಕ್ಕ ತನ್ನ ಗಂಡನ ಶೃಂಗಾರದ ರೀತಿಯನ್ನು ಈ ರೀತಿ ವಿವರಿಸುತ್ತಾಳೆ.

**ಎಲ್ಲರ ಗಂಡರ ಶೃಂಗಾರದ ಪರಿಯಲ್ಲ**
**ಎನ್ನ ನಲ್ಲನ ಶೃಂಗಾರದ ಪರಿಬೇರೆ**
**ಶಿರದಲ್ಲಿ ಕಂಕಣ, ಉರದಮೇಲಂದುಗೆ, ಕಿವಿಯಲ್ಲಿ ಹಾವುಗೆ,**
**ಉಭಯ ಸಿರಿವಂತನ ಮೊಳಕಾಲಲ್ಲಿ ಜಳವಟ್ಟಿಗೆ**
**ಉಂಗುಟದಲ್ಲಿ ಮುಕುತಿ - ಇದು ಜಾಣರಿಗೆ ಜಗುಳಿಕೆ**
**ಚೆನ್ನಮಲ್ಲಿಕಾರ್ಜುನಯ್ಯನ ಶೃಂಗಾರದ ಪರಿ ಬೇರೆ** [೧೧]

**ಹೊಳೆವ ಕೆಂಜಡಗಳ ಮಣಿಮುಕುಟದ ಒಪ್ಪುವ ಸುಲಿಪಲ್ಗಳ**
**ನಗೆಮೊಗದ ಕಂಗಳ ಕಾಂತಿಯ**
**ಈರೇಳು ಭುವನದ ಬೆಳಗುವ ದಿವ್ಯಸ್ವರೂಪನ ಕಂಡ ನಾನು** [೧೨]

ಈ ರೀತಿ ತನ್ನಿನಿಯನ ಅಸ್ತಿತ್ವವನ್ನು ವಿವರಿಸುವ ಅಕ್ಕ ಚೆನ್ನಮಲ್ಲಿಕಾರ್ಜುನನ ಮೂಲಕ ಗಂಡನ ವ್ಯಕ್ತಿತ್ವದ ರೂಪುರೇಖೆಗಳನ್ನು ತಿಳಿಸುತ್ತಾಳೆ. ಈ ರೀತಿ ಹೊಳೆವ ಕೆಂಜಂಡೆ, ಮಣಿ ಮುಕುಟ, ಸುಲಿಪಲ್ಗಳು, ನಗೆಮೊಗದ ಹಾಗೂ ಈ ಏಳು ಭುವನವನ್ನಾಳುವ ಅಧಿಕಾರ ಚೆನ್ನಮಲ್ಲಿಕಾರ್ಜುನನಿಗಲ್ಲದೆ ಲೋಕದ ಗಂಡಂದಿರಿಗೆ ಸಾಧ್ಯವಿಲ್ಲ ಎಂಬ ಅರಿವಿನಿಂದಲೇ ಅಕ್ಕ ಚೆನ್ನಮಲ್ಲಿಕಾರ್ಜುನನನ್ನು ತನ್ನ ಪತಿ ಎಂದು ಸ್ವೀಕರಿಸುತ್ತಾಳೆ. ಚೆನ್ನಮಲ್ಲಿಕಾರ್ಜುನನ ಮತ್ತೊಂದು ಗುಣ ವಿಶೇಷತೆಯನ್ನು ಈ ರೀತಿ ವಿವರಿಸುತ್ತಾಳೆ.

---

೧೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೯೧

೧೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೫೧

೧೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೧೨

ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿವೆ
ಎಡೆಯಿಲ್ಲದ ಕಡೆಯಿಲ್ಲದ ತರೆಹಿಲ್ಲವ ಕುರುಹಿಲ್ಲದ
ಚೆಲುವಂಗೆ ನಾನೊಲಿವೆ ಎಲೆ ಅವ್ವಗಳಿರಾ!
ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೊಲಿವೆ ನಾನು [೨೪]

ಎಂದು ಚೆನ್ನಮಲ್ಲಿಕಾರ್ಜುನನ ಸೀಮಾತೀತ ಸ್ವರೂಪವನ್ನು ಹೇಳುವುದರ ಮೂಲಕ ಲೌಕಿಕ ಗಂಡನ ಮಿತಿ ಹಾಗೂ ಚೌಕಟ್ಟುಗಳನ್ನು, ಅರ್ಥಹೀನತೆಯನ್ನು ಅಲ್ಲಗಳೆಯುತ್ತಾಳೆ.

ಸರ್ವಗುಣ ಸಂಪನ್ನನಾದ ಚೆನ್ನಮಲ್ಲಿಕಾರ್ಜುನನಂತಹ ಗಂಡನನ್ನು ಒಲಿಸಿಕೊಳ್ಳುವುದು ಸುಲಭಸಾಧ್ಯವಾದ ಕೆಲಸವಲ್ಲ. ಅದಕ್ಕೆ ಅಸೀಮ ಶ್ರದ್ಧೆ ನಿರಂತರ ಧ್ಯಾನ ಅಗತ್ಯ. ಇಂತಹ ಶಾಶ್ವತ ಗಂಡನನ್ನು ತನ್ನವನನ್ನಾಗಿಸಿಕೊಳ್ಳಲು ಅಕ್ಕ ಪಟ್ಟಶ್ರಮ ಕೂಡ ಹಿರಿದಾದದ್ದು. 'ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಸ್ಸಿದ್ದೆ ನೋಡಾ' ಎನ್ನುವ ಅಕ್ಕನ ಬಯಕೆ ಬಹು ಹಿಂದಿನದು ಎಂಬುದು ತಿಳಿದು ಬರುತ್ತದೆ. ಈ ರೀತಿ ಬಹುಕಾಲದಿಂದ ಆಶಿಸಿ ಉಂಟಾದ ವಿವಾಹದಿಂದ ಪಡೆದ ಸುಖ ಕೂಡ ವಿಶಿಷ್ಟವಾದದ್ದು.

ಲೇಸುಹಾಸು , ನೋಟವಾಭರಣ, ಆಲಿಂಗನ ವಸ್ತ್ರ
ಚುಂಬನವಾರೋಗಣೆ, ಲಲ್ಲೆವಾತು, ತಾಂಬೂಲ
ಲವಲವಿಕೆಯ ಅನುಲೇಪನವೆನಗೆ
ಚೆನ್ನಮಲ್ಲಿಕಾರ್ಜುನಕೂಟ ಪರಮಸುಖವವ್ವಾ [೨೫]

ಲೋಕದ ಗಂಡನೊಂದಿಗೆ ಕೂಟ ಎರದ ಮುಳ್ಳಿನಂತೆ ಎಂದು ಹೇಳುವ ಅಕ್ಕ ಪಾರಮಾರ್ಥಿಕ ಸುಖವನ್ನೇ ಮನಃಪೂರ್ವಕವಾಗಿ ಒಪ್ಪಿ ಸಂತೋಷಪಡುತ್ತಾಳೆ. ಏಕೆಂದರೆ ಇಲ್ಲಿ ದೇಹದ ಬಗೆಗಿನ ಆಕರ್ಷಣೆಯಾಗಲಿ, ಭೋಗಾಸಕ್ತಿಯ ಉತ್ಸಾಹವಾಗಲಿ, ನಾನು ಮೇಲು, ನೀನು ಕೀಳು ಎಂಬ ಭಾವವಾಗಲೀ ಕಂಡುಬರುವುದಿಲ್ಲ. ಒಬ್ಬರಲ್ಲೊಬ್ಬರು ಕೂಡಿ ಒಂದಾಗುವ, ಗುರುತಿಸಿಕೊಳ್ಳುವ ಸಮರ್ಪಣಾಭಾವ ಕಂಡು ಬರುತ್ತಿವೆ.

ಕಾಯ ಮೀಸಲಾಗಿ ನಿನಗರ್ಪಿತವಾಯಿತ್ತು.
ಕರಣ ಮೀಸಲಾಗಿ ನಿನಗರ್ಪಿತವಾಯಿತ್ತು
ಆನೊಂದರಿಯೆನಯ್ಯಾ
ಎನ್ನ ಗತಿ ನೀನಾಗಿ, ಎನ್ನ ಮತಿ ನೀನಾಗಿ
ಪ್ರಾಣ ನಿನಗರ್ಪಿತವಾಯಿತ್ತು [೨೬]

ಎಂದು ತನ್ನ ಕಾಯ, ಕರಣ, ಪ್ರಾಣ ಎಲ್ಲವನ್ನೂ ತನ್ನಿನಿಯನೊಂದಿಗೆ ಹಂಚಿಕೊಳ್ಳುವ ಅಕ್ಕ ಲೌಕಿಕದ ವಿಷಯ ಬಂದಾಗ ದೇಹವನ್ನು ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ ಎಂದು ಅದರ ಬಗೆಗಿನ ವ್ಯಾಮೋಹವನ್ನು

---

೨೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೯೬

೨೬. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೩೮

ನಿರಾಕರಿಸುತ್ತಾಳೆ. ದೈಹಿಕ ಭೋಗಾಸಕ್ತಿಯ ಬಗೆಗೆ ತಿರಸ್ಕಾರ ಮನೋಭಾವ ಹೊಂದಿದ್ದ ಅಕ್ಕ ಆಧ್ಯಾತ್ಮಿಕವಾಗಿ ಶಿವನೊಂದಿಗೆ ಲೀನವಾಗುವುದೇ ನಿಜವಾದ ಪರಮ ಸುಖವೆಂದು ಭಾವಿಸಿ ದೈಹಿಕ ಭೋಗದ ಬಗ್ಗೆ ತುಚ್ಛವಾಗಿ ನೋಡುತ್ತಾಳೆ. ಅವಳು ದೇಹಕ್ಕೆ, ದೈಹಿಕ ಸೌಂದರ್ಯಕ್ಕೆ ಮಹತ್ವ ಕೊಡಲಿಲ್ಲವಾದ್ದರಿಂದ ಎಲ್ಲವನ್ನೂ ತನ್ನಿನಯನಿಗೆ ಅರ್ಪಿಸಿದಳು. ಇದರಿಂದ ದೇಹದ ಬಗೆಗಿನ ವ್ಯಾಮೋಹ ಕೀಳಾಗಿ ಕಂಡಿದೆ.

**ಅಂಗವ ಲಿಂಗ ಮುಖದಲ್ಲಿ ಅರ್ಪಿಸಿ**
**ಅಂಗ ಅನಂಗವಾಯಿತ್ತು**
**ಮನವ ಅರಿವಿಂಗರ್ಪಿಸಿ ಮನಲಯವಾಯಿತ್ತು.**
**ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು.**
**ಅಂಗ ಮನಭಾವವಳಿದ ಕಾರಣ,**
**ಕಾಯ ಅಕಾಯವಾಯಿತ್ತು.**
**ಎನ್ನ ಕಾಯದ ಸುಖ ಭೋಗವ ಲಿಂಗವೆ ಭೋಗಿಸುವನಾಗಿ**
**ಶರಣ ಸತಿ ಲಿಂಗ ಪತಿಯಾದೆನು** ೨೭

ಇಲ್ಲಿ ಅಕ್ಕ ಮತ್ತು ಚೆನ್ನಮಲ್ಲಿಕಾರ್ಜುನನ ನಡುವೆ ಭೇದಭಾವವಿಲ್ಲದ ಕಾರಣ ಕಾಯ ಅಕಾಯವಾಗುವ ಸ್ಥಿತಿ ಉಂಟಾಗಿದೆ. ಆದುದರಿಂದ ತನ್ನೆಲ್ಲವನ್ನೂ ಅಲೌಕಿಕ ಗಂಡನಲ್ಲಿ ಬೆರೆಸಿದ ಮೇಲೆ ಕಾಯಕ್ಕೆ ಮಹತ್ವವಿಲ್ಲ ಅದು ನಾಶವಾಗುತ್ತದೆ, ಅಂದರೆ ದೈಹಿಕ ಸಂಬಂಧವನ್ನು, ಸೌಂದರ್ಯವನ್ನು ಮೀರಿದ ಪಾರಮಾರ್ಥಿಕ ಸಂಬಂಧದ, ಸೌಂದರ್ಯದ ಕಡೆಗೆ ಅಕ್ಕನ ಒಲವು. ಅದನ್ನು ಚೆನ್ನಮಲ್ಲಿಕಾರ್ಜುನನಲ್ಲಿ ಬೆರೆಯುವುದರ ಮೂಲಕ ಸಾಧಿಸಿದ್ದಾಳೆ.

**ನಾನು ನಿನಗೊಲಿದೆ, ನೀನು ಎನಗೊಲಿದೆ**
**ನೀ ನೆನ್ನನಗಲದಿಪ್ಪೆ, ನಾನಿನ್ನ ನಗಲದಿಪ್ಪೆನಯ್ಯಾ.**
**ನಿನಗೆ ಎನಗೆ ಬೇರೊಂದು ಠಾವುಂಟೆ?**
**ನೀನು ಕರುಣಿಯೆಂಬುದ ಬಲ್ಲೆನು ;**
**ನೀನಿರಿಸಿದ ಗತಿಯೊಳಗಿಪ್ಪವಳಾನು**
**ನೀನೆ ಬಲ್ಲೆ ಚೆನ್ನಮಲ್ಲಿಕಾರ್ಜುನ** ೨೮

ಈ ಬಗೆಯ ದಾಂಪತ್ಯ ಸಾಮರಸ್ಯ ಪಾರಮಾರ್ಥಿಕವಲ್ಲಲ್ಲದೆ ಲೌಕಿಕದೊಳಗೆ ಅಕ್ಕ ಪಡೆಯಲು ಸಾಧ್ಯವಿತ್ತೆ? ಲೌಕಿಕ ಪ್ರಭುತ್ವಶಾಹೀ ಗಂಡಂದಿರೊಂದಿಗೆ ಈ ಬಗೆಯ ದಾಂಪತ್ಯದ ನಿರೀಕ್ಷೆ ಹುಸಿ ಎಂದೇ ಆಕೆ ಪಾರಮಾರ್ಥಿಕ ಗಂಡನನ್ನು ಹಂಬಲಿಸಿದ್ದು. ಅಂತಹ ಪಾರಮಾರ್ಥಿಕ ಗಂಡನ ಕೂಡುವಿಕೆಯ ಹಂಬಲ 'ಹಾಸಿದ ಹಾಸಿಗೆಯ ಹಂಗಿಲ್ಲದೆ ಮೈಮರೆದು ಒರಗುವ ರೀತಿಯದ್ದು' ಚೆನ್ನಮಲ್ಲಿಕಾರ್ಜುನ ಮಹಾದೇವಿಯಕ್ಕನ ಪ್ರಾಣದಲ್ಲಿ ಪ್ರಾಣವಾಗಿ, ಮನದಲ್ಲಿ ಮನವಾಗಿ ನಿಂತಿದ್ದಾನೆ. ಇಂತವನನ್ನು ಅರೆಗಳಿಗೆಯೂ ಕಾಣದೆ ಇರಲಾರಳು. ಅಗಲಿ – ಬದುಕಲಾರಳು. ಆತನನ್ನು ಕಾಣದೆ 'ತಾನಾರೆಂಬುದನ್ನು' ಅರಿಯದಂತಾಗುತ್ತಾಳೆ. ಇಂತಹ ಗಂಡನೊಡನೆಯ ಶೃಂಗಾರವೂ ವಿಶೇಷವಾದುದು. ಅದು ಲೌಕಿಕ ದೈಹಿಕ ಭೋಗ ಸುಖವನ್ನು ಮೀರಿದ

---

೨೭. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೫

೨೮. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೦೯

ಆಧ್ಯಾತ್ಮಿಕ ಸಮ್ಮಿಲನ. 'ಅದು ಎಲ್ಲರ ಗಂಡರ ಶೃಂಗಾರದ ಪರಿಯಲ್ಲ' ಆತನೊಂದಿಗಿನ ವಿರಹವನ್ನು ಎಂದೂ ಸಹಿಸಲಾರಳು. 'ಚೆನ್ನಮಲ್ಲಿಕಾರ್ಜುನ ಒಂದಿರುಳಗಲಿವರೆ ತೆಕ್ಕೆ ಸವೆಲಿದ ಜಕ್ಕವಕ್ಕಿಯಂತಾವೆನ್ನವ್ವಾ' ಎಂದು ಆತಂಕ ಪಡುತ್ತಾಳೆ. ಆತನನ್ನು ಅಗಲಿಯೂ ಅಗಲದ ಸುಖಕ್ಕಾಗಿ ಹಂಬಲಿಸುತ್ತಾಳೆ.

ತನ್ನ ಇಷ್ಟದೈವ ಚೆನ್ನಮಲ್ಲಿಕಾರ್ಜುನನೊಂದಿಗೆ ಸರ್ವವನ್ನೂ ಸಾಮರಸ್ಯಗೊಳಿಸಿ ಸಮರ್ಪಿಸಿ ಆತನನ್ನು ಬೆರೆಯುವ ಇಂಗಿತವನ್ನು ವ್ಯಕ್ತಪಡಿಸುತ್ತಾಳೆ.

ನಚ್ಚುಗೆ ಮನ ನಿಮ್ಮಲ್ಲಿ, ಮೆಚ್ಚುಗೆ ಮನ ನಿಮ್ಮಲ್ಲಿ
ಸಲ್ಲುಗುಗೆ ಮನ ನಿಮ್ಮಲ್ಲಿ, ಸೋಲುಗೆ ಮನ ನಿಮ್ಮಲ್ಲಿ
ಅಳಲುಗೆ ಮನ ನಿಮ್ಮಲ್ಲಿ, ಬಳಲುಗೆ ಮನ ನಿಮ್ಮಲ್ಲಿ
ಕರಗುಗೆ ಮನ ನಿಮ್ಮಲ್ಲಿ, ಕೊರಗುಗೆ ಮನ ನಿಮ್ಮಲ್ಲಿ
ಎನ್ನ ಪಂಚೇಂದ್ರಿಯಂಗಳು ಕಬ್ಬುನ ಎಂಡ ನೀರಿನಂತೆ
ನಿಮ್ಮಲ್ಲಿ ಬೆರಸುಗೆ ಚೆನ್ನಮಲ್ಲಿಕಾರ್ಜುನಯ್ಯಾ [೨೮]

ದಾಂಪತ್ಯದಲ್ಲಿ ಎಲ್ಲವನ್ನೂ ಪರಸ್ಪರ ಸಮರ್ಪಿಸಿ ಬೆರೆಸಿ ಬಾಳುವ ಅಗತ್ಯವನ್ನು ಅಕ್ಕ ಹೇಳುತ್ತಾಳೆ. ಆ ಮೂಲಕ ಅಲೌಕಿಕ ಸುಖವನ್ನು ಪಡೆಯುತ್ತಾಳೆ. ಪ್ರತಿಯೊಂದರಲ್ಲೂ ಅಲೌಕಿಕತೆಗೇ ಮಹತ್ವ ಕೊಡುತ್ತಾಳೆ. ಲೌಕಿಕ ಸಂಬಂಧಗಳು ಪಾರಾಮಾರ್ಥಿಕ ನೆಲೆಗೆ ಏರಬೇಕೆಂಬ ಹಂಬಲ ಆಕೆಯದು. ಆ ಮೂಲಕ ಜೀವನದ ಸಾರ್ಥಕ್ಯವನ್ನು ಕಾಣಲು ಸಾಧ್ಯ. ಸಾಮರಸ್ಯವನ್ನು ಸಾಧಿಸಲು ಸಾಧ್ಯ. ಆಕೆಯ ಆದರ್ಶೀಕೃತ ಗಂಡ, ದಾಂಪತ್ಯ ಸಂಸಾರ ಸಂಬಂಧದ ಕಲ್ಪನೆಗಳು ಲೌಕಿಕಕ್ಕೆ ಪರ್ಯಾಯವಾಗಿ ಕಟ್ಟಿಕೊಂಡಂತಹವುಗಳು. ಲೌಕಿಕ ಬದುಕಿನಲ್ಲಿ ಇವುಗಳಿಗೆ ಅರ್ಥವಿಲ್ಲ, ಸಾಮರಸ್ಯವಿಲ್ಲ, ಕೇವಲ ಪರಾತಂತ್ರ ಭೋಗಾಸಕ್ತಿಯಿಂದ ಕೂಡಿದವು ಮಾತ್ರ. ಆದರೆ ಅಕ್ಕ ನಿರೂಪಿಸಿದುದು ಅವುಗಳನ್ನು ಮೀರಿದ ಸಾಮರಸ್ಯಯುತ ಅಲೌಕಿಕ ಸಿದ್ಧಿಯನ್ನು ಸಾಧ್ಯವಾಗಿಸುವ ಶಾಶ್ವತ ಸಂಬಂಧಗಳನ್ನು. ಅಂತಹ ಸಂಬಂಧಗಳು ಲೌಕಿಕ ಬದುಕಿನಲ್ಲಿ ಸಾಧ್ಯವಾಗಬೇಕು ಎಂಬುದು ಅಕ್ಕನ ನಿರೀಕ್ಷೆ.

---

೨೮ ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೦೨

# ಆ. ಲೌಕಿಕ ಗಂಡನ ನಿರಾಕರಣೆ

- ಲೌಕಿಕ ಗಂಡನ ಸ್ವರೂಪ ಹಾಗೂ ನಿರಾಕರಣೆಗೆ ಕಾರಣ
- ಆದರ್ಶ ಗಂಡ ಚೆನ್ನಮಲ್ಲಿಕಾರ್ಜುನನ ವ್ಯಕ್ತಿತ್ವ ವಿಶೇಷತೆ
- ಚೆನ್ನಮಲ್ಲಿಕಾರ್ಜುನನ ಅಸ್ತಿತ್ವದ ಹುಡುಕಾಟ

ಅಕ್ಕನ ಜೀವನ ಹಾಗೂ ವಚನಗಳನ್ನು ಅಧ್ಯಯನ ಮಾಡಿದಾಗ ಪ್ರತಿ ಹಂತದಲ್ಲಿಯೂ ನಮಗೆ ತಿಳಿದು ಬರುವ ಪ್ರಮುಖ ಸಂಗತಿಯೆಂದರೆ ಗಂಡು, ಗಂಡನ ಅಸ್ತಿತ್ವಕ್ಕೆ ಸಂಬಂಧಿಸಿದ ಸಂಗತಿಗಳೇ ಹೆಚ್ಚಾಗಿರುವುದು. ಆದರ್ಶ ವ್ಯಕ್ತಿ ಚೆನ್ನಮಲ್ಲಿಕಾರ್ಜುನನನ್ನು ತನ್ನ ಗಂಡನನ್ನಾಗಿ ಸ್ವೀಕರಿಸುವುದರ ಮೂಲಕ ಲೌಕಿಕ ಗಂಡನ ಸ್ವರೂಪವನ್ನು ವಿಮರ್ಶೆಗೆ ಒಳಪಡಿಸುವ ಅಕ್ಕ ಅವನ ವ್ಯಕ್ತಿತ್ವ ನಿರಾಕರಣೆಗೆ ಮುಂದಾಗುತ್ತಾಳೆ. ಮೊದಲೇ ತಿಳಿಸಿದಂತೆ ಅಕ್ಕನ ಚೆನ್ನಮಲ್ಲಿಕಾರ್ಜುನ ಯಾವುದೋ ಒಂದು ಗುಣದಿಂದ ಕೂಡಿರುವವನಲ್ಲ, ಸರ್ವಗುಣ ಸಂಪನ್ನ, ಶ್ರೇಷ್ಠ ವ್ಯಕ್ತಿತ್ವದ ಪ್ರತೀಕ. ಇಂತಹ ವ್ಯಕ್ತಿತ್ವದೊಂದಿಗೆ ಸಮ್ಮಿಲಿತಗೊಳ್ಳುವ ಅಕ್ಕನ ಬಯಕೆ ಲೌಕಿಕದಲ್ಲಿ ಪೂರ್ಣಗೊಳ್ಳಲು ಸಾಧ್ಯವಿಲ್ಲವೆನಿಸಿದಾಗ ಅವಳು ಪಾರಮಾರ್ಥಿಕ ಸಂಸಾರದ ಮೊರೆ ಹೋಗುತ್ತಾಳೆ. ಈ ಪಾರಮಾರ್ಥಿಕ ಸಂಸಾರದ ನೆವದಿಂದ ಇಡೀ ಲೌಕಿಕ ಸಂಸಾರ ಸಂಬಂಧಗಳ ಬಿಗಿತದಿಂದ ಬಿಡುಗಡೆ ಹೊಂದುತ್ತಾಳೆ. ಆದರ್ಶ ಸಂಸಾರದ ಹಂಬಲದಿಂದ ಎಂದೂ ಬಿಡದ ಬಾಳುವೆಗೆ ಮುಂದಾಗುವ ಅಕ್ಕ ಆದರ್ಶ ಗಂಡನ ನಿರೀಕ್ಷೆಯಲ್ಲಿ ತನ್ನ ಜೀವನದ ಬಹುಪಾಲು ಸಮಯವನ್ನು ಕಳೆಯುತ್ತಾಳೆ. ಈ ಸಂದರ್ಭದಲ್ಲಿ ಅವಳಿಗೆ ಎದುರಾದ ಸಮಸ್ಯೆಗಳಿಗೆ ಸೂಕ್ತ ಪರಿಹಾರವನ್ನು ತನ್ನ ಜೀವನ ವಿಧಾನದಿಂದಲೇ ಕಂಡುಕೊಳ್ಳಲು ಪ್ರಯತ್ನಿಸುತ್ತಾಳೆ. ಈ ನಿಟ್ಟಿನಲ್ಲಿ ಅವಳ ಪ್ರಪ್ರಥಮ ಪ್ರಯತ್ನವೇ ಲೌಕಿಕ ಗಂಡನ ನಿರಾಕರಣೆ ಹಾಗೂ ಆದರ್ಶ ಗಂಡನ ಹುಡುಕಾಟ. ಲೌಕಿಕ ಗಂಡನ ಸ್ವರೂಪವೇ ನಿರಾಕರಣೆಗೆ ಕಾರಣವೆನ್ನುವ ಅಕ್ಕ ಆದರ್ಶ ಗಂಡನ ವ್ಯಕ್ತಿತ್ವವನ್ನು ಚೆನ್ನಮಲ್ಲಿಕಾರ್ಜುನನ ರೂಪಕದ ಮೂಲಕ ತನ್ನದಾಗಿಸಿಕೊಳ್ಳಲು ಪ್ರಯತ್ನಿಸುತ್ತಾಳೆ.

## ಲೌಕಿಕ ಗಂಡನ ಸ್ವರೂಪ ಹಾಗೂ ನಿರಾಕರಣೆಗೆ ಕಾರಣ

ಲೌಕಿಕ ಭೋಗಾಸಕ್ತಿಯಿಂದ ಕೂಡಿದ ಸಂಸಾರ ಹಾಗೂ ಅದರ ಸಂಬಂಧಗಳ ವಿರುದ್ಧ ಅಕ್ಕ ಸಿಡಿದೆದ್ದ ಬಗೆಯನ್ನು ಹಿಂದಿನ ಅಧ್ಯಾಯದಲ್ಲಿ ತಿಳಿಯಲಾಗಿದೆ. ಈ ಸಂಸಾರದ ಪ್ರಮುಖ ಅಂಗವಾದ ಗಂಡನನ್ನು ಸ್ವೀಕರಿಸದಿರಲು ಕಾರಣ ಹಾಗೂ ಲೋಕದ ಗಂಡನ ಅಸ್ತಿತ್ವದ ಸ್ವರೂಪವನ್ನು ಕುರಿತಂತೆ ಪ್ರಸ್ತುತ ಅಧ್ಯಾಯದಲ್ಲಿ ಚರ್ಚೆ ಮಾಡಲಾಗುವುದು. ಅವಳ ವಚನಗಳ ಅಧ್ಯಯನದಿಂದ ತಿಳಿದುಬರುವ ಲೋಕದ ಗಂಡರ ಪ್ರಮುಖ ಲಕ್ಷಣವೆಂದರೆ ಅವರು ದೈಹಿಕ ಭೋಗಾಸಕ್ತಿಗೆ ಪ್ರಾಶಸ್ತ್ಯ ನೀಡುವವರೇ ವಿನಃ ಮಾನಸಿಕ ಇಚ್ಛಾಶಕ್ತಿಗೆ ಮಹತ್ವ ಕೊಡುವವರಲ್ಲ. ಅಕ್ಕ ಗ್ರಹಿಸಿದ

ದಾಂಪತ್ಯ ಜೀವನ ಪರಿಕಲ್ಪನೆಗೂ ಲೋಕ ರೂಢಿಯ ದಾಂಪತ್ಯ ಪರಿಕಲ್ಪನೆಗೂ ಅಪಾರ ವ್ಯತ್ಯಾಸವಿದೆ. ಅಕ್ಕನ ಪ್ರಕಾರ ದಾಂಪತ್ಯ ಮಾನಸಿಕ ಪ್ರಬುದ್ಧತೆಯ ಸಮ್ಮಿಲನ. ಲೋಕದ ಪ್ರಕಾರ ಹೆಣ್ಣಿನ ಮಾನಸಿಕ ಮತ್ತು ದೈಹಿಕ ಅಧೀನತೆಯೇ ಆಧಾರ. ಅಕ್ಕನಿಗೆ ದೇಹ ಒಂದು ಸಾಮಗ್ರಿಯಾದರೆ ಲೋಕಕ್ಕೆ ದೈಹಿಕ ಆಕರ್ಷಣೆಯೇ ದಾಂಪತ್ಯದ ಕೇಂದ್ರಬಿಂದು. ಆದುದರಿಂದಲೇ ಅಕ್ಕ ತನಗೆ ಸರಿಹೊಂದಿದ ಕೌಶಿಕನೊಂದಿಗಿನ ದಾಂಪತ್ಯ ಬಂಧನದಿಂದ ವಿಚ್ಛೇದಿತಳಾಗಿ ತನಗೆ ಸರಿಹೊಂದುವ ರೀತಿಯ ದಾಂಪತ್ಯದ ಆಯ್ಕೆಗೆ ಮುಂದಾಗುತ್ತಾಳೆ. ಈ ಹಿನ್ನೆಲೆಯಲ್ಲಿ ಅಕ್ಕ ಲೋಕ ಒಪ್ಪಿತ ಗಂಡ ಕೌಶಿಕ ಮತ್ತು ಅವನ ವ್ಯಕ್ತಿತ್ವವನ್ನು ವಿರೋಧಿಸುವುದರ ಮೂಲಕ ಲೌಕಿಕ ಗಂಡನ ಸಂಬಂಧವನ್ನು ತಿರಸ್ಕರಿಸಿ ಆದರ್ಶ ಪತಿ ಚೆನ್ನಮಲ್ಲಿಕಾರ್ಜುನನ ಹುಡುಕಾಟಕ್ಕೆ ತೊಡಗುತ್ತಾಳೆ. ತನ್ನ ಆಲೋಚನೆಗೂ ಲೋಕದ ಗಂಡನ ಆಲೋಚನೆಗೂ ಸರಿಹೊಂದದ ಸ್ಥಿತಿಯನ್ನು ಅಕ್ಕ ತನ್ನ ವಚನದಲ್ಲಿ ಈ ರೀತಿ ಹೇಳಿದ್ದಾಳೆ.

ಎಮ್ಮೆಗೊಂದು ಚಿಂತೆ, ಸಮ್ಮಗಾರಗೊಂದು ಚಿಂತೆ.
ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ.
ಎನಗೆ ಎನ್ನ ಚಿಂತೆ, ತನಗೆ ತನ್ನ ಕಾಮದ ಚಿಂತೆ.
ಒಲ್ಲೆ ಹೋಗು, ಸೆರಗಬಿಡು ಮರುಳೆ.
ಎನಗೆ ಚೆನ್ನಮಲ್ಲಿಕಾರ್ಜುನ ದೇವರು
ಒಲಿವರು ಒಲಿಯರೊ ಎಂಬ ಚಿಂತೆ! [೧]

ಎಂದು ಲೋಕದ ಗಂಡ ತನ್ನ ಮನಸ್ಥಿತಿಯನ್ನು ಅರಿಯದವನಾಗಿದ್ದಾನೆ ಎಂಬ ನೋವನ್ನೇ ವ್ಯಕ್ತಪಡಿಸುತ್ತಾಳೆ. ಅಲ್ಲದೆ ಅವಳ ಮಾನಸಿಕ ತೊಳಲಾಟದ ಸ್ಥಿತಿಯಲ್ಲಿಯೂ ಕೂಡ ಅವನು ತನ್ನ ಕಾಮಾಸಕ್ತಿಯನ್ನು ಈಡೇರಿಸಿಕೊಳ್ಳಲು ಮುಂದಾಗುತ್ತಾನೆಯೇ ವಿನಃ ಅವಳ ಸಂದಿಗ್ಧತೆಯ ನಿವಾರಣೆಗೆ ಮನಸ್ಸು ಮಾಡುವುದಿಲ್ಲ. ಈ ರೀತಿಯ ದೈಹಿಕ ಆಕರ್ಷಣೆಯೇ ಕೇಂದ್ರ ಬಿಂದುವಾದ ಸಂಬಂಧದಿಂದ ಮಾನಸಿಕ ನೆಮ್ಮದಿ ಸಾಧ್ಯವಿಲ್ಲ. ಆದುದರಿಂದ ಅಕ್ಕ ತನ್ನನ್ನು ಮೋಹಿನಿ ಬಂದ ಗಂಡನನ್ನು 'ಒಲ್ಲೆ ಹೋಗು ಸೆರಗ ಬಿಡು ಮರುಳೆ' ಎಂದು ನಿರಾಕರಿಸುತ್ತಾಳೆ. ಈ ರೀತಿಯ ಗಂಡ ಅಕ್ಕನ ಬಗೆಗೆ ನಿಜವಾದ ಪ್ರೀತಿ, ಪ್ರೇಮ ಬಯಸಿ ಬಂದವನಲ್ಲ, ಅವಳ ಅಂಗಸುಖವನ್ನು ಸವಿಯಲು ದೇಹದ ಮೇಲಿನ ವ್ಯಾಮೋಹದಿಂದ ಬಂದವನು. ಅಂತಹವನ ಬಗೆಗೆ ಅಕ್ಕನಿಗೆ ವಿಪರೀತ ಬೇಸರ, ಅಸಹ್ಯ ಮನೋಭಾವನೆ ಇದೆ.

ನೋಡುವ ಕಂಗಳಿಗೆ ರೂಪಿಂಬಾಗಿರಲು
ನೀವು ಮನನಾಚದೆ ಬಂದಿರಣ್ಣಾ.
ಕೇಳಿದ ಶ್ರೋತ್ರಸೊಗಸಿಗೆ ನೀವು ಮರುಳಾಗಿ ಬಂದಿರಣ್ಣಾ.
ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣಾ.
ಮೂತ್ರವು ಬಿಂದು ಒಸರುವ ನಾಳವೆಂದು
ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ.
ಬುದ್ಧಿಗೇಡಿ ತನದಿಂದ ಪರಮಾರ್ಥದ ಸುಖವ ಹೋಗಲಾಡಿಸಿಕೊಂಡು
ಇದಾವ ಕಾರಣವೆಂದರಿಯದೆ
ನೀವು ನರಕ ಹೇತುವೆಂದರಿತು ಮನ ಹೇಸದೆ ಬಂದಿರಣ್ಣಾ.
ಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರರು
ಛೀ, ಹೋಗಾ ಮರುಳೆ. [೨]

೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೮೬

೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೨೨

ಎಂದು ಗಂಡಿನ ಭೋಗಾಸಕ್ತಿಯನ್ನು ಕಟುವಾಗಿ ಟೀಕಿಸುತ್ತಾಳೆ. ಇಂತಹ ಗಂಡುಗಳು ಕೇವಲ ನಾರಿಯೆಂಬ ರೂಪಕ್ಕೆ ಒಲಿದು ಬಂದವರೇ ವಿನಃ ಪರಿಶುದ್ಧ ದಾಂಪತ್ಯ ಮನೋಭಾವದಿಂದಲ್ಲ ಎಂಬ ಅಂಶ ಸ್ಪಷ್ಟವಾಗುತ್ತದೆ. ಆದುದರಿಂದ ಅಕ್ಕ ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿದ ಪುರುಷರೆನಗೆ ಸಹೋದರರು ಎಂದು ಅವರ ವ್ಯಕ್ತಿತ್ವವನ್ನು ಜರಿದು ನಿರಾಕರಿಸುತ್ತಾಳೆ. ಅಲ್ಲದೆ ಈ ರೀತಿಯ ಅಪೇಕ್ಷೆಗಳನ್ನು ಈಡೇರಿಸಲು ತನ್ನಿಂದ ಸಾಧ್ಯವಿಲ್ಲವೆನ್ನುವ ಅಕ್ಕ ತನಗೊಲಿದವರನು ಇಂತಹ ಪ್ರಲೋಭನೆಗಳಿಂದ ಮುಕ್ತನಾಗಬೇಕೆಂದು ಬಯಸುತ್ತಾಳೆ. ಮುಖ್ಯವಾಗಿ ಲೋಕದ ಗಂಡ ಬಯಸುವ ಹೆಣ್ಣಿನ ಲಕ್ಷಣಗಳು ತನ್ನಲಿಲ್ಲ ಎಂದು ತನ್ನ ದೈಹಿಕ ನಿಲುವನ್ನು ಕುರಿತು ಈ ರೀತಿ ವಿವರಿಸಿದ್ದಾಳೆ.

**ಬಟ್ಟಹ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣಾ.**
**ಅಣ್ಣಾ , ನಾನು ಹೆಂಗೂಸಲ್ಲ, ಅಣ್ಣಾ ನಾನು ಸೂಳೆಯಲ್ಲ.**
**ಅಣ್ಣಾ ಮತ್ತೆ ನನ್ನ ಕಂಡು ಕಂಡು ಆರೆಂದು ಬಂದಿರಣ್ಣಾ?**
**ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿದ ಪರ ಪುರುಷನು**
**ನಮಗಾಗದ ಮೋರೆ ನೋಡಣ್ಣಾ**[೩]

ತನ್ನನ್ನು ಮೋಹಿನಿ ಬಂದ ಪುರುಷರಿಗೆ ನಾನು ಹೆಣ್ಣೂ ಅಲ್ಲ, ಸೂಳೆಯೂ ಅಲ್ಲ ಎಂದು ಕಟುವಾಗಿ ನುಡಿಯುತ್ತಾಳೆ. ಈ ಮೇಲಿನ ವಚನಗಳಲ್ಲಿ ಅಕ್ಕ ಪುರುಷ ಪ್ರಭುತ್ವದ ನಡೆ-ನುಡಿ, ಆಚಾರ-ವಿಚಾರ, ವ್ಯಕ್ತಿತ್ವದ ಬಗೆಗೆ ತೀವ್ರ ಪ್ರತಿರೋಧ ಒಡ್ಡಿರುವುದನ್ನು ಗಮನಿಸಬಹುದು. ಗಂಡಿನ ನಿಜವಾದ ವ್ಯಕ್ತಿತ್ವವನ್ನು ಸಮಾಜದ ಮುಂದಿಡುವ ದಿಟ್ಟ ಸಾಹಸವನ್ನು ಮಾಡಿದ್ದಾಳೆ. ಈ ರೀತಿ ಗಂಡಿನ ಅಸ್ತಿತ್ವವನ್ನು ಹೀನಗರೆಯುವ ಅಕ್ಕನ ಮನೋಭಾವ ಪುರುಷ ಪ್ರಧಾನ ನೆಲೆಯ ಬಗೆಗೆ ಅವಳಿಗಿದ್ದ ರೋಷ, ತಿರಸ್ಕಾರದ ಮನೋಭಾವವನ್ನು ವ್ಯಕ್ತಪಡಿಸುತ್ತವೆ. ಇಂದ್ರಿಯಗಳ ಹಿಡಿತಕ್ಕೆ ಸಿಕ್ಕ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡ ಈ ಬಗೆಯ ಗಂಡನ ಸಹವಾಸದಿಂದ ತನಗೆ ಸುಖ ದೊರೆಯಲು ಸಾಧ್ಯವಿಲ್ಲವೆಂದು ತನ್ನ ಪ್ರಿಯಕರನಾದ ಚೆನ್ನಮಲ್ಲಿಕಾರ್ಜುನನನ್ನು ಗಂಡನನ್ನಾಗಿ ಸ್ವೀಕರಿಸುತ್ತಾಳೆ. ಈ ಹಿನ್ನೆಲಯಲ್ಲಿ ಲೌಕಿಕ ಗಂಡನ ಸಂಬಂಧದ ಅನಿವಾರ್ಯತೆಯನ್ನು ಪ್ರಶ್ನಿಸಿ

**ಇಹಕ್ಕೊಬ್ಬ ಗಂಡನೆ? ಪರಕ್ಕೊಬ್ಬ ಗಂಡನೆ?**
**ಲೌಕಿಕಕ್ಕೊಬ್ಬ ಗಂಡನೆ? ಪಾರಮಾರ್ಥಕ್ಕೊಬ್ಬ ಗಂಡನೆ?**
**ಎನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ**
**ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ ಬೊಂಬೆಯಂತೆ**[೪]

ಎಂದು ಲೋಕದ ಗಂಡನನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತಾಳೆ. ಚೆನ್ನಮಲ್ಲಿಕಾರ್ಜುನನಲ್ಲದೆ ಉಳಿದವರು ಮುಗಿಲ ಮರೆಯ ಬೊಂಬೆಗಳಂತೆ ಅದನ್ನು ಮುಟ್ಟಲು ತನಗೆ ಸಾಧ್ಯ ಇಲ್ಲವೆನ್ನುತ್ತಾಳೆ. ಅಪ್ಪಿ ತಪ್ಪಿಯಾದರೂ ಇವರ ಸಹವಾಸವನ್ನು ಮಾಡಿದರೆ ಅನುಭವಿಸಬೇಕಾದ ನೋವು - ದುಃಖ ಅಪಾರ ಎಂದು ನೊಂದು ನುಡಿಯುತ್ತಾಳೆ.

---

೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೯೩

೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೬೫

ಎರದ ಮುಳ್ಳಿನಂತೆ ಪರಗಂಡರೆನಗವ್ವಾ.
ಸೋಂಕಲಮ್ಮೆ ಸುಳಿಯಲಮ್ಮೆ ;
ನಂಬಿ ನಚ್ಚಿ ಮಾತಾಡಲಮ್ಮೆನವ್ವಾ.
ಚೆನ್ನಮಲ್ಲಿಕಾರ್ಜುನನಲ್ಲದ ಗಂಡರಿಗೆ
ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆ ನವ್ವಾ ೫

ಎಂದು ತನಗೆ ಚೆನ್ನಮಲ್ಲಿಕಾರ್ಜುನನಲ್ಲದ ಲೋಕದ ಗಂಡನ ಬಗೆಗೆ ನಂಬಿಕೆಯಾಗಲೀ, ನೆಚ್ಚಿಗೆಯಾಗಲೀ ಇಲ್ಲದಿರುವ ಕಾರಣ ಅವರನ್ನು ಸ್ವೀಕರಿಸಲು ಒಪ್ಪೆ ಎನ್ನುತ್ತಾಳೆ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಅಕ್ಕ ಕಂಡ ಗಂಡುಗಳು ಅವಳ ದೇಹ ಮೋಹಿಸಿ ಬಂದವರು ಎಂಬುದು ವ್ಯಕ್ತವಾಗುತ್ತದೆ. ಕೌಶಿಕ ಕೂಡ ಅವಳ ಸೌಂದರ್ಯಕ್ಕೆ ಮರುಳಾಗಿ ವಿವಾಹದ ಆಹ್ವಾನವನ್ನು ತಂದವನು. ಕ್ಷಣಕಾಲದ ನೋಟದಲ್ಲಿಯೇ ದಾಂಪತ್ಯದ ಕನಸು ಕಂಡವನು. ಆದರೆ ಅಕ್ಕನಿಗೆ ಈ ಬಗೆಯ ದಾಂಪತ್ಯದ ಕಡೆ ಒಲವಿಲ್ಲವಾದ್ದರಿಂದ ಅವಳು ನಾಶವಾಗುವ ದೇಹಕ್ಕಿಂತ ಶಾಶ್ವತವಾದ ಮಾನಸಿಕ ಕ್ರಿಯೆಗಳ ಬಗೆಗೆ ಹೆಚ್ಚು ಆಸಕ್ತಿ ತೋರುತ್ತಾಳೆ. ಮನಸ್ಸಿನ ಮಾತಿಗೆ ಬೆಲೆಯೇ ಇಲ್ಲದ ಕೌಶಿಕನೊಂದಿಗಿನ ದಾಂಪತ್ಯ ಸಂಬಂಧ ಅವಳಿಗೆ ಅಸಾಧ್ಯವೆನಿಸುತ್ತದೆ. ಆದುದರಿಂದ ಅವಳು ಕೌಶಿಕನೊಂದಿಗಿನ ವಿವಾಹ ಸಂಬಂಧವನ್ನು ಸಂಪೂರ್ಣವಾಗಿ ತಿರಸ್ಕರಿಸಿ ದಿಗಂಬರೆಯಾಗಿ ಹೊರಡುವ ಮೂಲಕ ಅವನ ಕಾಮಾಸಕ್ತಿ, ದೈಹಿಕ ಪ್ರಲೋಭನೆಗಳಿಗೆ ತೆರೆ ಎಳೆಯುತ್ತಾಳೆ. ಒಟ್ಟಾರೆ ಅಕ್ಕ ತನ್ನ ವಚನಗಳಲ್ಲಿ ಕೌಶಿಕನ ರೂಪಕದ ಮೂಲಕ ಲೌಕಿಕ ಗಂಡನ ವ್ಯಕ್ತಿತ್ವವನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದಾಳೆ ಎಂದೆನಿಸುತ್ತದೆ.

## ಆದರ್ಶ ಗಂಡ ಚೆನ್ನಮಲ್ಲಿಕಾರ್ಜುನನ ವ್ಯಕ್ತಿತ್ವ, ವಿಶೇಷತೆ

ಲೌಕಿಕ ಗಂಡನ ಸ್ವರೂಪವೇ ಅವನ ವ್ಯಕ್ತಿತ್ವ ನಿರಾಕರಣೆಗೆ ಕಾರಣವೆನ್ನುವ ಅಕ್ಕ ತಾನು ಬಯಸುವ ಗಂಡ ಯಾವ ರೀತಿ ಇರಬೇಕು ಎಂಬುದನ್ನು ತನ್ನ ವಚನಗಳಲ್ಲಿ ತಿಳಿಸದ್ದಾಳೆ. ಅಕ್ಕ ತನ್ನ ಗಂಡನ ವ್ಯಕ್ತಿತ್ವವನ್ನು ಚೆನ್ನಮಲ್ಲಿಕಾರ್ಜುನನ ರೂಪಕದ ಮೂಲಕ ಬಿಚ್ಚಿಡುತ್ತಾಳೆ. ಅವಳು ಕಟ್ಟಿಕೊಡುವ ಚೆನ್ನಮಲ್ಲಿಕಾರ್ಜುನ ಸಂಪೂರ್ಣ ಲೌಕಿಕ ಸಂಬಂದದಿಂದ ದೂರವಾಗಿ ಪಾರಮಾರ್ಥಿಕ ಬಂಧನಕ್ಕೆ ಒಳಗಾದವನಲ್ಲ, ಲೌಕಿಕ ಮತ್ತು ಪರಮಾರ್ಥದ ಎರಡೂ ಗುಣಗಳನ್ನು ಮೈಗೂಡಿಸಿಕೊಂಡವನು. ಇವನೊಂದಿಗಿನ ಅಕ್ಕನ ಸಂಬಂಧ ಕಂಡೂಕಾಣದ, ಕೂಡಿಯೂ ಕೂಡದ, ಎಂದೂ ಬಿಡದ ಅನ್ಯೋನ್ಯ ದಾಂಪತ್ಯ. ಈ ದಾಂಪತ್ಯ ಕೇವಲ ದೈಹಿಕ ಆಕರ್ಷಣೆಯಿಂದ ಕೂಡಿರದೆ ತನು ಮನಗಳಲ್ಲಿ ಸರ್ವಾಂತರ್ಯಾಮಿಯಾಗಿ ವ್ಯಾಪಿಸಿದೆ. ಅಕ್ಕನ ಸಂಪೂರ್ಣ ವ್ಯಕ್ತಿತ್ವ ಅವಳಿನಿಯನಿಗೆ ಮೀಸಲಾಗಿ ಒಬ್ಬರೊಳಗೊಬ್ಬರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಶ್ರೇಷ್ಠ ದಾಂಪತ್ಯ ಇಲ್ಲಿದೆ. ಸಾವಿಲ್ಲದ, ಕೇಡಿಲ್ಲದ, ರೊಹಿಲ್ಲದ ಚೆಲುವಂಗೆ ಒಲಿದೆ ಎನ್ನುವ ಅಕ್ಕ ಮಧುರ ಪ್ರೇಮ ಸಂಬಂಧಕ್ಕೆ ಸಾವು, ಕೇಡು, ರೂಪುಗಳು ಅಡ್ಡಿಯನ್ನುಂಟು ಮಾಡಲಾರವು ಎಂಬ ಅನ್ಯೋನ್ಯ ಸಂಬಂಧದ ಕಲ್ಪನೆಯನ್ನು ಚೆನ್ನಮಲ್ಲಿಕಾರ್ಜುನನೊಂದಿಗೆ ಸಂಬಂಧದ ಮೂಲಕ ಕಟ್ಟಿಕೊಡುತ್ತಾಳೆ.

೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೮೭

ಒಡಲಿಲ್ಲದ ನುಡಿಯಿಲ್ಲದ ಕಡೆಯಿಲ್ಲದ
ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯಾ.
ಭಾಷೆ ಪೈಸರವಿಲ್ಲ, ಓಸರಿಸೆನನ್ಯಕ್ಕೆ,
ಆಸೆ ಮಾಡೆನು ಮತ್ತೆ ಭಿನ್ನ ಸುಖಕ್ಕೆ,
ಆರಳಿದು ಮೂರಾಗಿ, ಮೂರಳಿದು ಎರಡಾಗಿ
ಎರಡಳಿದು ಒಂದಾಗಿ ನಿಂದೆನಯ್ಯಾ [೬]

ಎಂದು ಸುಖೀದಾಂಪತ್ಯದ ಕಲ್ಪನೆಯನ್ನು ಕಟ್ಟಿಕೊಡುತ್ತಾಳೆ. ಒಡಲಿಲ್ಲದ, ನುಡಿಯಿಲ್ಲದ, ಕಡೆಯಿಲ್ಲದ ನಲ್ಲನ ಒಡಗೂಡಿ ಸುಖಿಯಾದೆ ಎಂಬುದು ವಿರೋಧಾಭಾಸದ ಸಂಗತಿಯಾಗಿ ಕಂಡರೂ ಕೂಡ ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಯ್ಯಾ ಎಂಬುದು ಭಿನ್ನ ಅಸ್ತಿತ್ವವನ್ನು ಮೀರಿ ನಿಲ್ಲುವ, ಎಲ್ಲವನ್ನೂ ತನ್ನಲ್ಲಿ ಕೇಂದ್ರೀಕರಿಸಿಕೊಂಡ ಮನಃಸ್ಥಿತಿಯನ್ನು ತಿಳಿಸುತ್ತದೆ. ಈ ರೀತಿಯ ಗಂಡನನ್ನು ವರಿಸಬೇಕಾದರೆ ಧೈರ್ಯ, ಸ್ಥೈರ್ಯವುಳ್ಳ ಹೆಣ್ಣಿನಿಂದ ಮಾತ್ರ ಸಾಧ್ಯ. ಇಂತಹ ಮನಃಸ್ಥಿತಿಯನ್ನು ಅಕ್ಕ ತನ್ನಲ್ಲಿ ರೂಢಿಸಿಕೊಳ್ಳಲು ಪ್ರಯತ್ನಿಸುತ್ತಾಳೆ.

ಕಂಗಳ ಕಳೆದು ಕರುಳ ಕಿತ್ತು ಕಾಮನ ಮೂಗ ಕೊಯ್ದು
ಭಂಗದ ಬಟ್ಟೆಯ ಭವ ಗೆಲಿದವಳಗಂಗ ವೆಲ್ಲಿಯದು ಹೇಳಾ ! [೭]

ಕಾಮನ ತಲೆಯ ಕೊರೆದು ಕಾಲನ ಕಣ್ಣ ಕಳೆದು,
ಸೋಮ ಸೂರ್ಯರ ಹುರಿದು ಹುಡಿಮಾಡಿ ತಿಂಬವಳಿಂಗೆ
ನಾಮವ ನೀಡಬಲ್ಲವರಾರು ಹೇಳಿರೆ [೮]

ಒಲೆಯ ಹೊಕ್ಕು ಉರಿಯ ಮರೆದವಳು,
ಮಲೆಯ ಹೊಕ್ಕು ಉಲುಹ ಮರೆದವಳು ತಾನು [೯]

ಎಂದು ಜಗತ್ತನ್ನು ತನ್ನ ಹಿಡಿತದಲ್ಲಿರಿಸಿಕೊಳ್ಳಬಲ್ಲ ಸಾಮರ್ಥ್ಯವುಳ್ಳ ಗಂಡನಿಗೆ ತಕ್ಕ ಹೆಂಡತಿಯಾಗಿ ಬಾಳುವೆ ಎಂಬ ಅಚಲ ವಿಶ್ವಾಸ ವ್ಯಕ್ತಪಡಿಸುವುದರ ಮೂಲಕ ಗಂಡು, ಹೆಣ್ಣಿನ ದೈಹಿಕ ಮತ್ತು ಮಾನಸಿಕ ಸಾಮರ್ಥ್ಯವನ್ನು ಅಲ್ಲಗಳೆದಿದ್ದ ಸಂದರ್ಭದಲ್ಲಿ ಅಕ್ಕ ತನ್ನ ನಲ್ಲನನ್ನು ಕೂಡಲು ಎಂತಹ ವಿಷಮ ಪರಿಸ್ಥಿತಿಯನ್ನಾದರೂ ಎದುರಿಸಲು ಸಿದ್ಧ ಎನ್ನುವ ಮನೋಭಾವವನ್ನು ವ್ಯಕ್ತಪಡಿಸುತ್ತಾಳೆ. ಹೆಣ್ಣಿಗೆ ಯಾವುದೇ ರೀತಿಯ ಸಾಮರ್ಥ್ಯವಿಲ್ಲ ಎನ್ನುವ ಸಂದರ್ಭದಲ್ಲಿ ಅಕ್ಕ ದೈಹಿಕ, ಮಾನಸಿಕ ಸಾಮರ್ಥ್ಯದ ಜೊತೆಗೆ ತನ್ನ ಗಂಡನನ್ನು ತಾನೇ ಆರಿಸುವ ಅವನೆತ್ತರಕ್ಕೆ ಏರುವ ಮೂಲಕ ಪುರುಷ ಪ್ರಧಾನ ವ್ಯವಸ್ಥೆಯ ಪರಂಪರಾಗತ ನಂಬಿಕೆಯನ್ನು ತಲೆಕೆಳಗು ಮಾಡಿ ಪ್ರತಿಭಟನೆಯನ್ನು ಆರಂಭಿಸುತ್ತಾಳೆ. ತನ್ನ ಜೀವನದುದ್ದಕ್ಕೂ ಇದೇ ರೀತಿ ಸಾಗುವ ಅಕ್ಕ ಆದರ್ಶ ಪತಿಯೊಂದಿಗಿನ ದಾಂಪತ್ಯ ಜೀವನ ಹೇಗಿರಬೇಕೆಂಬುದರ ಬಗ್ಗೆ ಕೂಡ ಸಮಾಜದ ಸಿದ್ಧ ನಂಬಿಕೆಗಳನ್ನು ಮುರಿಯಲು ಪ್ರಯತ್ನಿಸುತ್ತಾಳೆ.

---

೬. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೯೮

೭. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೦೮

೮. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೨೮

೯. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೦೪

ಕಾಯ ಮೀಸಲಾಗಿ ನಿನಗರ್ಪಿತವಾಯಿತ್ತು.
ಕರಣ ಮೀಸಲಾಗಿ ನಿನಗರ್ಪಿತವಾಯಿತ್ತು.
ಆನೊಂದರಿಯೆನಯ್ಯಾ.
ಎನ್ನ ಗತಿ ನೀನಾಗಿ, ಎನ್ನ ಮತಿ ನೀನಾಗಿ
ಪ್ರಾಣ ನಿನಗರ್ಪಿತವಾಯಿತ್ತು.
ನೀನಲ್ಲದೆ ಪರತ್ತೊಂದ ನೆನೆದಡೆ
ಆಣೆ, ನಿಮ್ಮಾಣೆ, ಚೆನ್ನಮಲ್ಲಿಕಾರ್ಜುನಾ ೧೦

ಎಂದು ತನ್ನ ಇರುವಿಕೆಯನ್ನು ಸಂಪೂರ್ಣವಾಗಿ ತನ್ನ ಗಂಡನಿಗೆ ಮೀಸಲಿರಿಸುವ ಅಕ್ಕನಿಗೆ ಬೇರೊಂದನ್ನು ನೆನೆಯುವ ಮನಸ್ಸಿಲ್ಲ, ಅಲ್ಲದೆ ತನ್ನಿನಿಯನಿಗೆ ಎಲ್ಲವನ್ನೂ ಸಮರ್ಪಿಸಿಕೊಂಡ ಮೇಲೆ ನಾನು ನೀನು ಎಂಬ ಭೇದವಿಲ್ಲ. ಮೇಲು -ಕೀಳು ಎಂಬ ಭಾವವಿಲ್ಲ, ಆದುದರಿಂದ ಅಕ್ಕ ತನ್ನ ಗಂಡನನ್ನು ಕೂಡುವಿಕೆ ಕೇವಲ ದೈಹಿಕ ಕ್ರಿಯೆ ಮಾತ್ರವಾಗಿರದೆ ಅದು ಮಾನಸಿಕ, ಭಾವನಾತ್ಮಕ, ಪ್ರಕ್ರಿಯೆಯೊಂದು ಭಾವಿಸಿ ''ಎನ್ನ ಕರತುಂಬಿ, ಎನ್ನ ಮನತುಂಬಿ, ಎನ್ನ ಭಾವ ತುಂಬಿ, ಮತ್ತಿಲ್ಲದೆ ನಿನ್ನ ಕೂಟದ ಸವಿಗಲೆಯನೆಂತು ಕಾಣುವೆನಯ್ಯಾ'' ಎಂದು ಹಂಬಲಿಸುತ್ತಾಳೆ. ಅಲ್ಲದೆ ತನ್ನ ತನುಮನ ಎಲ್ಲವೂ ತನ್ನ ಪತಿಯಾದವನಿಗೇ ಮೀಸಲು ಎನ್ನುವ ಅಕ್ಕ

ತನು ಮೀಸಲಾಗಿ, ಮನ ಮೀಸಲಾಗಿ,
ಭಾವವಚ್ಚುಗೊಂಡಿಪುದವ್ವಾ ,
ಅಚ್ಚುಗನ ಸ್ನೇಹ, ನಿಚ್ಚಟದ ಮೆಚ್ಚುಗೆ
ಬೆಚ್ಚು ಬೇರಾಗದ ಭಾವವಾಗೆ
ಚೆನ್ನಮಲ್ಲಿಕಾರ್ಜುನಯ್ಯಾ ಒಳಗೆ ಗಟ್ಟಿಗೊಂಡಿಪ್ಪನವ್ವಾ ೧೧

ಎಂದು ತನ್ನ ಪ್ರಾಣದಲ್ಲಿ ಸಂದು ಮನಕ್ಕೆ ಮನವಾಗಿ ನಿಂತ ಮಲ್ಲಿಕಾರ್ಜುನನ ಕಾಣದೆಡೆ ಆನೆಂತು ಬದುಕುವೆನು ಎಂದು ಪರಿತಪಿಸುತ್ತಾಳೆ. ದೈಹಿಕ ಆಕರ್ಷಣೆಯಿಂದ ಕೂಡಿದ ಲೌಕಿಕದ ದಾಂಪತ್ಯಕ್ಕಿಂತ ಮಾನಸಿಕ ಹೊಂದಾಣಿಕೆಯಿಂದ ಕೂಡಿದ ಅನ್ಯೋನ್ಯ ದಾಂಪತ್ಯ ಕಲ್ಪನೆ ಕಟ್ಟಿಕೊಡುತ್ತಾಳೆ. ಇವಳ ದಂಪತ್ಯ ಸಂಬಂದದಲ್ಲಿ ಗಂಡು-ಹೆಣ್ಣು ಎಂಬ ಅಹಂಮ್ಮಿಕೆಯಾಗಲೀ, ಕಿಳರಿಮೆಯಾಗಲೀ ಕಾಡುವುದಿಲ್ಲ. ಆದುದರಿಂದಲೇ ಅಕ್ಕ.

ಕೋಲ ತುದಿಯ ಕೋಡಗದಂತೆ
ನೇಣ ತುದಿಯ ಬೊಂಬೆಯಂತೆ
ಆಡಿದೆನಯ್ಯಾ ನೀನಾಡಿಸಿದಂತೆ
ಆನು ನುಡಿವೆನಯ್ಯಾ ನೀ ನುಡಿಸಿದಂತೆ
ಆನು ಇದ್ದೆನಯ್ಯಾ ನೀನು ಇರಿಸಿದಂತೆ
ಜಗದ ಯಂತ್ರವಾಹಕ ಚೆನ್ನಮಲ್ಲಿಕಾರ್ಜುನ ಸಾಕೆಂಬನ್ನಕ್ಕ ೧೨

ಎಂದು ತನ್ನ ಪ್ರತಿಯೊಂದು ಕ್ರಿಯೆಗೂ ಚೆನ್ನಮಲ್ಲಿಕಾರ್ಜುನನೇ ಕಾರಣ ಎಂದು ತನ್ನ ಮೇಲೆ ಚೆನ್ನಮಲ್ಲಿಕಾರ್ಜುನನ ಹಿಡಿತವನ್ನು ತಿಳಿಸುತ್ತಾಳೆ. ಆದರೆ ಇಲ್ಲಿ ದರ್ಪದ ಪ್ರಭುತ್ವದ ಹಿಡಿತವಿಲ್ಲ. ಬದಲಾಗಿ ಆತ್ಮೀಯತೆಯ ಮಧುರ

---

೧೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೩೮

೧೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೮೧

೧೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೫೩

ಬಾಂಧವ್ಯದ ಹಿಡಿತವಿದೆ. ಆದುದರಿಂದಾಗಿ ಅಕ್ಕನಿಗೆ ತಾನು ಚೆನ್ನಮಲ್ಲಿಕಾರ್ಜುನನ ಆಧೀನದಲ್ಲಿರುವವಳು ಎಂಬ ಭಾವನೆ ಮೂಡುವುದಕ್ಕಿಂತ ಇಬ್ಬರೂ ಒಬ್ಬರಿಗೊಬ್ಬರು ಒಲಿವ, ಕೂಡುವ, ಅನ್ಯೋನ್ಯ ಆತ್ಮೀಯತೆಯ ಸಂಬಂಧವನ್ನು ಹೊಂದಿರುವ ಮನೋಭಾವ ವ್ಯಕ್ತವಾಗುತ್ತದೆ. ''ನಾನು ನಿನಗೊಲಿದೆ, ನೀನು ನನಗೊಲಿದೆ, ನೀ ನೆನ್ನನಗಲ ದಿಪ್ಪೆ, ನಾನಿನ್ನ ನಗಲದಿಪ್ಪೆನಯ್ಯಾ, ನಿನಗೆ ಎನಗೆ ಬೇರೊಂದು ಠಾವುಂಟೆ?'' ಎಂದು ಒಬ್ಬರೊಳಗೊಬ್ಬರು ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಶ್ರೇಷ್ಠ ದಾಂಪತ್ಯದ ಪರಿಕಲ್ಪನೆ ಇಲ್ಲಿದೆ. ಹೆಣ್ಣು ಸದಾ ಗಂಡನೊಂದಿಗೆ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಪರಿಪಾಠವನ್ನು ಮೀರಿ ಅಕ್ಕ ತನ್ನಲ್ಲೇ ಚೆನ್ನಮಲ್ಲಿಕಾರ್ಜುನನ ಅಸ್ತಿತ್ವವನ್ನು 'ಒಳಗಣ ಗಂಡನಯ್ಯಾ, ಹೊರಗಣ ಮಿಂಡನಯ್ಯಾ' ಎಂದು ಲೋಕದ ದೃಷ್ಟಿಗಿಂತ ತನ್ನ ದೃಷ್ಟಿಯ ಗಂಡನ ಸ್ವರೂಪ ಯಾವ ಬಗೆಯಾದದ್ದು ಎಂಬುದನ್ನು ಪ್ರಚುರಪಡಿಸುತ್ತಾಳೆ. ಅಲ್ಲದೆ ತಾನು ಹಾಗೂ ಚೆನ್ನಮಲ್ಲಿಕಾರ್ಜುನ ಬೇರೆ ಬೇರೆ ಅಲ್ಲ ಎಂಬುದನ್ನು ಈ ವಚನದ ಮೂಲಕ ತಿಳಿಸಲು ಪ್ರಯತ್ನಿಸುತ್ತಾಳೆ.

**ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ**
**ಆಲಿಕಲ್ಲ ಹಸೆಯ ಹಾಸಿ ಬಾಸಿಗವ ಕಟ್ಟಿ**
**ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡಬಂದು ಮದುವೆಯಾದನು**
**ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ** ೧೩

ಎನ್ನುವಲ್ಲಿ ಮದುವೆ ಮನೆಗೆ ಸಂಬಂಧಿಸಿದ ರೂಪಕಗಳು ತೀರಾ ಅಸಾಧ್ಯವೆನಿಸಿದರೂ ಕೂಡ ಅವು ತಮ್ಮ ಇರುವಿಕೆಯನ್ನು ಮೀರಿ ವ್ಯಾಪಕ ಸ್ಥಿತಿ ಪಡೆದಿರುವುದನ್ನು ಕಾಣಬಹುದು. ಅಲ್ಲದೆ ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಕಾಲು ತಲೆ ಒಂದಾದ ಗಂಡು ಹೆಣ್ಣಿನ ಸಮಾಗಮದ ಸ್ಥಿತಿಯನ್ನು ತಿಳಿಸುತ್ತದೆ. ಈ ರೀತಿ ಉಂಟಾದ ದಾಂಪತ್ಯದಿಂದ ಎಂದಿಗೂ ಸಹ ಬಿಡುಗಡೆ ಸಾಧ್ಯವಿಲ್ಲ. ಹೀಗೆ ಅಕ್ಕ ಲೋಕ ಸಹಜವಾದ ರೀತಿಯ ದಾಂಪತ್ಯ, ಮದುವೆ ಸಂಬಂಧವನ್ನು ನಿರಾಕರಿಸಿ ತನ್ನದೇ ಆದ ರೀತಿಯ ಸಾಂಸಾರಿಕ ಸಂಬಂಧಗಳ ಹುಡುಕಾಟದ ಮೂಲಕ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ.

ಅಕ್ಕ ಬಯಸಿದ ಗಂಡಿನ ಸ್ವರೂಪವೂ ಕೂಡ ಲೋಕರೀತಿಗಿಂತ ತೀರಾ ಭಿನ್ನವಾದದ್ದು. ಅವನು ಲೋಕದ ಸಾಮಾನ್ಯ ಮನುಷ್ಯರಂತೆ ಸಾವು ಕೇಡಿಗೆ ಅಂಜುವಂತವನಲ್ಲ, ಭವ ಭಯಗಳಿಗೆ ಒಳಗಾದವನಲ್ಲ ಇವೆಲ್ಲವನ್ನೂ ಮೀರಿನಿಂತು ಹೊಳೆವ ಕೆಂಜಡೆ, ಪಣಿಮಣಿ ಕರ್ಣಮಂಡಲ, ರುಂಡಮಾಲೆಯ ಕೊರಳನ್ನು ತನ್ನ ಅಲಂಕಾರಕ್ಕೆ ಬಳಸಿರುವ ಮಹಾನ್ ಧೀರ ವ್ಯಕ್ತಿತ್ವವನ್ನು ಹೊಂದಿರುವವನು. ಅಕ್ಕ ಅವನ ಶೃಂಗಾರದ ರೀತಿ ಲೋಕರೂಢಿಗಿಂತ ಯಾವ ರೀತಿ ಭಿನ್ನವಾದದ್ದು ಎಂಬುದನ್ನು ಈ ರೀತಿ ವರ್ಣಿಸಿದ್ದಾಳೆ.

**ಎಲ್ಲರ ಗಂಡರ ಶೃಂಗಾರದ ಪರಿಯಲ್ಲ,**
**ಎನ್ನ ನಲ್ಲನ ಶೃಂಗಾರದ ಪರಿ ಬೇರೆ.**
**ಶಿರದಲ್ಲಿ ಕಂಕಣ, ಉರದ ಮೇಲಂದುಗೆ, ಕಿವಿಯಲ್ಲಿ ಹಾವುಗೆ,**
**ಉಭಯ ಸಿರಿವಂತನ ಮೊಳಕಾಲಲ್ಲಿ ಜಳವಟ್ಟಗೆ**
**ಉಂಗುಟದಲ್ಲಿ ಮೂಕುತಿ, ಇದು ಜಾಣರಿಗೆ ಜಗುಳಿಕೆ**
**ಚೆನ್ನಮಲ್ಲಿಕಾರ್ಜುನಯ್ಯನ ಶೃಂಗಾರದ ಪರಿ ಬೇರೆ** ೧೪

---

೧೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೭೬

೧೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೯೨

ಎಂದು ಉಭಯ ಸಿರಿವಂತನಾದ ತನ್ನ ಪತಿ ಎಲ್ಲರಂತಲ್ಲದೆ ಅತ್ಯಂತ ಹೆಚ್ಚು ವಿಭಿನ್ನವಾದ ವಿಶೇಷವಾದ ಗುಣಗಳನ್ನು ಹೊಂದಿರುವವನು ಎಂದು ವರ್ಣಿಸುತ್ತಾಳೆ. ಈ ರೀತಿಯ ಗಂಡನನ್ನು ಅಪೇಕ್ಷಿಸಲು, ಪಡೆಯಲು, ಸಾಮಾನ್ಯ ಸ್ತ್ರೀಯರಿಗೆ ಸಾಧ್ಯವೇ ಎಂಬ ಪ್ರಶ್ನೆ ಬಹುಮುಖ್ಯವಾದದ್ದು ಎನಿಸುತ್ತದೆ. ಏಕೆಂದರೆ ಧೀರ ಉದಾತ್ತ ಲಕ್ಷಣಗಳನ್ನು ಒಳಗೊಂಡಿರುವ ಚೆನ್ನಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಅಷ್ಟೇ ಶ್ರದ್ಧೆ ವಿಶ್ವಾಸ, ಆತ್ಮಸ್ಥೈರ್ಯದಿಂದ ಕೂಡಿದ ಹೆಣ್ಣಿನಿಂದ ಮಾತ್ರ ಸಾಧ್ಯ. ಈ ಗುಣಗಳನ್ನು ಅಕ್ಕ ಮೈಗೂಡಿಸಿಕೊಂಡಿದ್ದರಿಂದಲೇ ಅವಳು ''ಕರಚೆಲುವ ಶ್ರೀ ಶೈಲ ಚೆನ್ನಮಲ್ಲಿಕಾರ್ಜುನನ ಸಜ್ಜನದ ಗಂಡನ ಮಾಡಿಕೊಂಬೆ'' ಎಂದು ಧೈರ್ಯವಾಗಿ ಹೇಳವುದು. ಇಂತಹ ಗಂಡನೊಂದಿಗಿನ ದಾಂಪತ್ಯ ಸಂಬಂಧ ಕೂಡ ಸಾಮಾನ್ಯ ರೀತಿಯಾದುದ್ದಲ್ಲ. ಅತ್ಯಂತ ಅಮೋಘವಾದದ್ದು ಹಾಗೂ ಶ್ರೇಷ್ಠವಾದದ್ದು. ಸತಿ - ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎನ್ನುವಂತೆ ಸತಿಪತಿ ಎಂಬ ಭೇದ ಭಾವವಿಲ್ಲದೆ ಎಲ್ಲ ಕೆಲಸದಲ್ಲಿಯೂ ಕೂಡಿ ಬಾಳುವ ಪರಿ ವಿಶೇಷವಾದದ್ದು. ಅಕ್ಕ ಈ ಸುಖೀ ದಾಂಪತ್ಯದ ಭಾಗವಾದ ಲೈಂಗಿಕತೆಯ ಬಗೆಗೆ ಮುಕ್ತವಾಗಿ ಮಾತನಾಡುತ್ತಾಳೆ. ಲೈಂಗಿಕತೆಯ ಬಗೆಗೆ ಹೆಣ್ಣಾಗಲೀ, ಗಂಡಾಗಲೀ ಮುಕ್ತವಾಗಿ ಮಾತನಾಡುವುದು ಇಂದಿಗೂ ಕೂಡ ನಿಷಿದ್ಧ ಎಂಬ ಮನೋಭಾವವಿರುವ ಸಂದರ್ಭದಲ್ಲಿ ಅಕ್ಕ ಆ ಕಾಲದಲ್ಲಿಯೇ ತನ್ನಿನಿಯನೊಂದಿಗಿನ ಮಧುರ ದಾಂಪತ್ಯದ ಕ್ಷಣಗಳನ್ನು ಇತರರೊಂದಿಗೆ ಹಂಚಿಕೊಳ್ಳುತ್ತಾಳೆ. ಈ ಪ್ರಯತ್ನದ ಮೂಲಕ ಸುಖೀ ದಾಂಪತ್ಯದ ಪರಿಕಲ್ಪನೆಯನ್ನು ಕಟ್ಟಿಕೊಡುವ ಆಶಯ ಅಕ್ಕನದು.

> **ಕಾಮಿಸಿ, ಕಲ್ಪಿಸಿ ಕಂದಿ ಕುಂದಿದೆನವ್ವಾ**
> **ಮೋಹಿಸಿ ಮುದ್ದಿಸಿ ಮರುಳಾದೆನವ್ವಾ**
> **ತೆರೆಯದೆ ತೊರೆಯದೆ ನಲಿದು ನಂಬಿದೆ ನಾನು**
> **ಎನ್ನದೇವ ಚೆನ್ನಮಲ್ಲಿಕಾರ್ಜುನ ನನ್ನನೊಲ್ಲದಡೆ**
> **ಆನೇವೆನವ್ವಾ** [೧೫]

ಎಂದು ಪರಿತಪಿಸುವ ಅಕ್ಕನ ಈ ವಚನದಲ್ಲಿ ಹೆಣ್ಣೂ ಕೂಡ ಮುಕ್ತವಾಗಿ ಲೈಂಗಿಕ ಕ್ರಿಯೆಯಲ್ಲಿ ತೊಡಗಬಹುದು ಎಂಬ ಭಾವ ವ್ಯಕ್ತವಾಗಿದೆ. ಅಲ್ಲದೆ ಇಲ್ಲಿ ಅಕ್ಕ ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯಾಗಬೇಕೆಂದು ಪತಿಯ ಅನ್ವೇಷಣೆಗೆ ತಾನೇ ಮುಂದಾಗಿರುವುದನ್ನು, ಅವನು ಒಪ್ಪದಿದ್ದರೆ ಮುಂದೇನು ಎಂಬ ದುಗುಡ ತುಂಬಿರುವುದನ್ನು ಕಾಣಬಹುದು. ಚೆನ್ನಮಲ್ಲಿಕಾರ್ಜುನನ ಬರುವಿಕೆಗೆ ಸದಾ ಕಾತರಿಸುವ ಅಕ್ಕ

> **ಬಂದಹನೆಂದು ಬಟ್ಟೆಯ ನೋಡಿ,**
> **ಬಾರದಿದ್ದರೆ ಕರಗಿ ಕೊರಗಿದೆನವ್ವಾ .**
> **ತಡವಾದಡೆ ಬಡವಾದೆ ತಾಯಿ.**
> **ಚೆನ್ನಮಲ್ಲಿಕಾರ್ಜುನನ ಒಂದಿರುಳಗಲಿದಡೆ**
> **ತೆಕ್ಕೆ ಸಡಿಲಿದ ಜಕ್ಕ ವಕ್ಕಿಯಂತಾದೆನವ್ವಾ** [೧೬]

ಎಂದು ಸಾಮಾನ್ಯ ಸ್ತ್ರೀ ತನ್ನ ಗಂಡನ ಬರುವಿಕೆಗಾಗಿ ಕಾಯುವಂತೆ ಕಾಯುತ್ತಾಳೆ. ಅಲ್ಲದೆ ತಡವಾದರೆ ಬಡವಾದೆ ಎನ್ನುವ ಅಕ್ಕ ಒಂದಿರುಳಗಲಿದಡೆ ತೆಕ್ಕೆ ಸಡಿಲಿದ ಜಕ್ಕಪಕ್ಕಿಯಂತಾದೆನವ್ವಾ ಎಂದು ಚೆನ್ನಮಲ್ಲಿಕಾರ್ಜುನನ ಅಗಲಿಕೆಯ ನೋವನ್ನು ಹೇಳಿಕೊಳ್ಳುತ್ತಾಳೆ. ಈ ಅಗಲಿಕೆಯಲ್ಲಿಯೂ ಹಿತವಿದೆಯೆನ್ನುವ ಅಕ್ಕನ ಮನೋಭಾವ ದಾಂಪತ್ಯದ ಸವಿ ಯಾವ ರೀತಿಯದ್ದು ಎಂಬುದನ್ನು ಈ ವಚನ ವಿವರಿಸುತ್ತದೆ.

---

೧೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೭೧

೧೬. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೭೮

ಕೂಡಿ ಕೂಡುವ ಸುಖದಿಂದ
ಒಪ್ಪಚ್ಚಿ ಅಗಲಿ ಕೂಡುವ ಸುಖ ಲೇಸು, ಕೆಳದಿ
ಒಚ್ಚೊತ್ತಗಲಿದಡೆ ಕಾಣದಿರಲಾರೆ, ಎನ್ನದೇವ
ಚೆನ್ನಮಲ್ಲಿಕಾರ್ಜುನನಗಲಿಯಗಲದ ಸುಖವೆಂದಪ್ಪುದೊ? [೧೭]

ಎನ್ನುವ ಮೂಲಕ ದಾಂಪತ್ಯದಲ್ಲಿ ಬರುವ ಸುಖ-ದುಃಖ, ನೋವು-ನಲಿವು, ಅಗಲಿಕೆ-ವಿರಹ ಎಲ್ಲವೂ ಸಾಮಾನ್ಯ. ಆದರೆ ಎಲ್ಲವನ್ನೂ ಸಮಚಿತ್ತದಿಂದ ಸ್ವೀಕರಿಸಬೇಕೆಂಬ ಇಂಗಿತ ವ್ಯಕ್ತಪಡಿಸುತ್ತಾಳೆ. ಒಟ್ಟಾರೆ ಅಕ್ಕನ ಈ ವಚನಗಳನ್ನು ಅಧ್ಯಯನ ಮಾಡಿದಾಗ ತಿಳಿದುಬರುವ ಮುಖ್ಯಸಂಗತಿಯೆಂದರೆ ಅಕ್ಕ ಸಮಾಜ, ಸಂಸಾರ, ವಿವಾಹ ಮುಂತಾದ ವಿಷಯಗಳಲ್ಲಿ ಹೆಣ್ಣಿನ ಮಹತ್ವ ಮತ್ತು ಪ್ರಾಮುಖ್ಯತೆಯನ್ನು ಪ್ರತಿ ಹಂತದಲ್ಲಿಯೂ ಎತ್ತಿ ಹಿಡಿಯುತ್ತಾಳೆ.

ಈ ರೀತಿ ಅಕ್ಕ ತನ್ನನ್ನು ಚೆನ್ನಮಲ್ಲಿಕಾರ್ಜುನನಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಂಡರೂ ಕೂಡ ಎಲ್ಲಿಯೂ ಅವಳು ತನ್ನ ಸ್ವಂತಿಕೆಯನ್ನು ಕಳೆದುಕೊಳ್ಳುವುದಿಲ್ಲ. ಪ್ರತಿ ಹಂತದಲ್ಲಿಯೂ ಆತ್ಮಸ್ಥೈರ್ಯ, ದೃಢ ವಿಶ್ವಾಸದಿಂದ ಮುನ್ನಡೆಯುತ್ತಾಳೆ. ಚೆನ್ನಮಲ್ಲಿಕಾಜುರನ ಒಪ್ಪದಿದ್ದರೂ ಕೂಡ ಎದೆಗುಂದದೆ ಅವನನ್ನು ಒಲಿಸಿಕೊಳ್ಳುವ ದಿಟ್ಟತನವನ್ನು ಪ್ರದರ್ಶಿಸುತ್ತಾಳೆ.

ಅಯ್ಯಾ, ನೀನು ಕೇಳಿದಡೆ ಕೇಳು ಕೇಳದೆಡೆ ಮಾಣು ;
ಆನು ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ ,
ಅಯ್ಯಾ, ನೀನು ನೋಡಿದಡೆ ನೋಡು, ನೋಡದೆಡೆ ಮಾಣು ;
ಆನು ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ.
ಅಯ್ಯಾ, ನೀನು ಮೆಚ್ಚಿದಡೆ ಮಚ್ಚು, ಮಚ್ಚದೆಡೆ ಮಾಣು ;
ಆನು ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ, ನೀನು ಒಲಿದೆಡೆ ಒಲಿ, ಒಲಿಯದೆಡೆ ಮಾಣು ;
ಆನು ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ.[೧೮]

ಅಯ್ಯಾ ನೀನೆನ್ನ ಮೊರೆಯನಾಲಿಸಿದಡಾಲಿಸು
ಆಲಿಸದಿರ್ಪಡೆ ಮಾಣು
ಅಯ್ಯಾ, ನೀನೆನ್ನ ದುಃಖವ ನೋಡಿದಡೆ ನೋಡು,
ನೋಡದಿರ್ದಪೆ ಮಾಣು
ನಿನಗಿದು ವಿಧಿಯೆ !
ನೀನೊಲ್ಲದೆಡೆ ಆನೊಲಿಸುವ ಪರಿಯೆಂತಯ್ಯಾ?
ಮನವಳಿಸಿ ಮಾರುಹೋಗಿ ಮರೆವೊಕ್ಕೆಡೆ
ಕೊಂಬ ಪರಿಯಂತಯ್ಯಾ ಚೆನ್ನಮಲ್ಲಿಕಾರ್ಜುನಾ? [೧೯]

೧೮. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೬
೧೯. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೭
೨೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೭೪

ಎಂದು ಸಮಚಿತ್ತದಿಂದ ತನ್ನ ಸಮಸ್ಯೆಯನ್ನು ನಿವೇದಿಸಿಕೊಳ್ಳುತ್ತಾಳೆ. ಅಕ್ಕನಿಗೆ ತನ್ನ ಅಸ್ತಿತ್ವದ ಬಗೆಗೆ ಕೀಳರಿಮೆಯಾಗಲೀ, ಹಿಂಜರಿಕೆಯಾಗಲೀ ಕಂಡುಬರುವುದಿಲ್ಲ. ಅಲ್ಲದೆ ಬೇರೆಯವರು ತನ್ನ ನಡವಳಿಕೆಯನ್ನು ಮೆಚ್ಚಬೇಕೆಂಬ ಹಂಬಲ ಇಲ್ಲ. ತನ್ನ ಕಾರ್ಯದ ಬಗೆಗೆ ತನಗಿರುವ ನಂಬಿಕೆಗೆ ಬದ್ಧವಾಗಿರುವ ಅಕ್ಕ ಬೇರೆಯವರೊಂದಿಗೆ ಕಾಂಪ್ರಮೈಸ್ ಮಾಡಿಕೊಳ್ಳಲಿಕ್ಕಾಗಲೀ, ಅವರನ್ನು ಒಪ್ಪಿಸುವ ಪ್ರಯತ್ನಕ್ಕಾಗಲೀ ಮುಂದಾಗುವುದಿಲ್ಲ. ಈ ರೀತಿಯ ಮನೋಭಾವ ತನ್ನ ಬಗೆಗೆ ತನಗಿರುವ ದೃಢ ವಿಶ್ವಾಸ ಮತ್ತು ಅಪಾರ ಸಾಮರ್ಥ್ಯವನ್ನು ತಿಳಿಸುತ್ತವೆ. ಅಕ್ಕ ಎಲ್ಲವನ್ನೂ ಗೆದ್ದೇ ಗೆಲ್ಲುತ್ತೇನೆಂಬ ಅಚಲ ವಿಶ್ವಾಸದಿಂದಲೇ ತನ್ನ ಸುತ್ತಲಿನ ಸಮಾಜದ ವಿರುದ್ಧ ಸಿಡಿದೇಳುವ ಪ್ರಯತ್ನ ಮಾಡಿದಳು. ಜೊತೆಗೆ ತಾನು ಒಪ್ಪದ ಬದುಕನ್ನು ಪ್ರತಿ ಹಂತದಲ್ಲಿಯೂ ಸಮರ್ಥಿಸಿಕೊಳ್ಳುತ್ತಾ ಎಲ್ಲಿಯೂ ಹಿಂದಡಿಯಿಡದೆ ಮುನ್ನಡೆದಳು.

ಅಕ್ಕ ಪ್ರಸ್ತುತ ಸಮಾಜದ ಎಲ್ಲಾ ಕಟ್ಟುಪಾಡುಗಳನ್ನು ಮೀರುವುದರೊಂದಿಗೆ ತನ್ನದೇ ಆದ ರೀತಿಯ ಆದರ್ಶ ಸಮಾಜ, ಸಂಬಂಧ ಕಟ್ಟುವಿಕೆಗೆ ಮುಂದಾಗುತ್ತಾಳೆ. ಸಾಂಪ್ರದಾಯಿಕ ಗಂಡಿನ ಅಸ್ತಿತ್ವವನ್ನು ಪ್ರಶ್ನಿಸುವ ಅಕ್ಕ ಅವನ ಎಲ್ಲಾ ಗುಣ ವಿಶೇಷಗಳನ್ನು ಅಲ್ಲಗಳೆದು ಆದರ್ಶ ಗಂಡಿನ ವ್ಯಕ್ತಿತ್ವಕ್ಕೆ ತನ್ನದೇ ಆದ ಪರಿಕಲ್ಪನೆಯನ್ನು ಕಟ್ಟಿಕೊಡುತ್ತಾಳೆ. ತನ್ನ ಸ್ವಾಭಿಮಾನಕ್ಕೆ, ಆತ್ಮಾಕಾಂಕ್ಷೆಗೆ ಅಡ್ಡಬರದ, ಧೈರ್ಯ, ಸಾಹಸ, ಉತ್ಸಾಹ, ಪ್ರೀತಿ, ಮಮತೆ, ಮಮಕಾರ ಎಲ್ಲದರಲ್ಲಿಯೂ ಪರಿಣಿತನಾಗಿರುವ ವ್ಯಕ್ತಿ ತನ್ನ ಗಂಡನಾಗಬೇಕೆಂದು ಬಯಸುತ್ತಾಳೆ. ಹೆಣ್ಣಿನ ಎಲ್ಲಾ ಕ್ರಿಯೆಗಳು ಗಂಡಿಗೆ ಕೇಂದ್ರಿತವಾಗಿದ್ದ ಸಂದರ್ಭದಲ್ಲಿ ಅಕ್ಕ ತನ್ನ ವ್ಯಕ್ತಿತ್ವವನ್ನು ಕೇಂದ್ರವಾಗಿಸಿಕೊಂಡು ಅದಕ್ಕೆ ಸರಿಹೊಂದುವ ಗಂಡಿನ ಹುಡುಕಾಟಕ್ಕೆ ಮುಂದಾಗುವುದರ ಮೂಲಕ ಸಮಾಜದ ಸಿದ್ಧ ನಂಬಿಕೆಯನ್ನು ಮುರಿಯಲು ಪ್ರಯತ್ನಿಸುತ್ತಾಳೆ. ಈ ರೀತಿ ಅಕ್ಕ ತನ್ನ ಸಮಕಾಲೀನ ಸಮಾಜದೊಂದಿಗೆ ಮುಖಾಮುಖಿಯಾಗುವ ಬಗೆಯೇ ವಿಶಿಷ್ಟ ರೀತಿಯದ್ದಾಗಿದೆ. ತನಗೆ ಎದುರಾದ ಸಮಸ್ಯೆಗಳಿಗೆ ತಾನೇ ಪರಿಹಾರವನ್ನು ಕಂಡುಕೊಳ್ಳುವ ಮುಖಾಂತರ ತನ್ನ ಸ್ವತಂತ್ರ ಅಸ್ತಿತ್ವವನ್ನು ದೃಢೀಕರಿಸುತ್ತಾಳೆ. ಒಟ್ಟಾರೆ ಅಕ್ಕ ತನ್ನ ಜೀವನದ ಎಲ್ಲಾ ನಿರ್ಧಾರಗಳನ್ನು ತಾನೇ ತೆಗೆದುಕೊಳ್ಳುವುದಕ್ಕೆ ಮುಂದಾಗುತ್ತಾಳೆ. ಮಾತ್ರವಲ್ಲದೆ ಸರಿ-ತಪ್ಪುಗಳನ್ನು ತಿದ್ದುವ, ಓರೆ ಕೋರೆಗಳನ್ನು ಸರಿಪಡಿಸಿಕೊಳ್ಳುವ ಸಾಮರ್ಥ್ಯವನ್ನು ತೋರುತ್ತಾಳೆ.

ಅಕ್ಕನ ಲೌಕಿಕ ಗಂಡನ ನಿರಾಕರಣೆ ಹಾಗೂ ಆದರ್ಶ ಗಂಡ ಚೆನ್ನಮಲ್ಲಿಕಾರ್ಜುನನ ಸ್ವೀಕಾರ ಕ್ರಮ ಮೇಲುನೋಟಕ್ಕೆ ಅವಳ ಆಧ್ಯಾತ್ಮದ ಹಂಬಲವನ್ನು ವ್ಯಕ್ತಪಡಿಸಿದರೂ ಕೂಡ ಅಂತರಾಳದ ಮೂಲೆಯಲ್ಲಿ ಅಕ್ಕ ತನ್ನಿಚ್ಛೆಯಂತೆ ನಡೆಯುವ ತನ್ನ ಮನದ ಮಾತಿಗೆ ಸ್ಪಂದಿಸುವ, ತನ್ನೆಲ್ಲಾ ಕಾರ್ಯಗಳಿಗೆ ಸಹಕರಿಸುವ ಮಾದರಿ ವ್ಯಕ್ತಿಯನ್ನು ತನ್ನವನನ್ನಾಗಿಸಿಕೊಳ್ಳಲು ಪರಿತಪಿಸುತ್ತಿದ್ದಳು ಎಂಬುದು ಅವಳ ವಚನಗಳಿಂದ ವ್ಯಕ್ತವಾಗುತ್ತದೆ. ಕುಟುಂಬ ಹಾಗೂ ಪುರುಷ ಪ್ರಭುತ್ವವೇ ಪ್ರಧಾನವಾಗಿದ್ದ ಸಂದರ್ಭದಲ್ಲಿ ಅಕ್ಕ ಅದನ್ನು ಮೀರಿ ತನ್ನದೇ ಆದ ರೀತಿಯ ಮಾದರಿ ಕುಟುಂಬ ಕಟ್ಟಲು ಮುಂದಾಗುತ್ತಾಳೆ. ವಾಸ್ತವದಲ್ಲಿ ಇದರ ನಿರ್ಮಿತಿಗೆ ಎದುರಾದ ಅಡ್ಡಿ ಆತಂಕಗಳು ಮತ್ತು ಸಮಾಜದ ಸಂಪ್ರದಾಯಗಳನ್ನು ಒಂದೇ ಬಾರಿಗೆ ಎದುರಿಸಲಾಗದೆ,

ಪಾರಮಾರ್ಥಿಕ ಕುಟುಂಬದ ಮೊರೆ ಹೋದಳು ಎಂದೆನಿಸುತ್ತದೆ. ಈ ಪಾರಮಾರ್ಥಿಕ ಸಂಬಂಧದಲ್ಲಿ ತನ್ನ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಆದುದರಿಂದಲೇ ಅಕ್ಕನ ವಚನಗಳಲ್ಲಿ ಕಂಡುಬರುವ ಕುಟುಂಬ, ದಾಂಪತ್ಯ, ಲೈಂಗಿಕತೆ, ಮುಂತಾದ ಸಂಬಂಧಗಳು ಲೌಕಿಕಕ್ಕಿಂತ ಭಿನ್ನವಾದ ಸಂಪೂರ್ಣ ಪಾರಮಾರ್ಥಿಕವೂ ಅಲ್ಲದೆ, ಉತ್ಕಟ ಪ್ರೇಮಾಭಿವ್ಯಕ್ತಿಯ ಸ್ವರೂಪದ್ದಾಗಿರುವುದು. ಅಕ್ಕ ಪಾರಮಾರ್ಥಿಕ ಸಂಸಾರ ಸಂಬಂಧದ ನೆವದಲ್ಲಿ ಲೌಕಿಕದ ಜಡತೆಯಿಂದ ಕೂಡಿದ ಸಂಸಾರ ಮತ್ತು ಸಂಬಂಧದ ವಿರುದ್ಧ ತೀವ್ರವಾದ ಪ್ರತಿಭಟನೆಯನ್ನು ಸಾರುತ್ತಾಳೆ.

## ಚೆನ್ನಮಲ್ಲಿಕಾರ್ಜುನನ ಅಸ್ತಿತ್ವದ ಹುಡುಕಾಟ

ಸಂಸಾರ, ಕುಟುಂಬ, ಮದುವೆ, ದಾಂಪತ್ಯ ಮುಂತಾದ ವಿಷಯಗಳ ಬಗೆಗೆ ಅಕ್ಕ ತಳೆದ ನಿಲುವು ಅದರ ಕಟ್ಟುವಿಕೆ ಮತ್ತು ನಿರ್ವಹಣೆಯಲ್ಲಿ ಸಮಾಜದೊಂದಿಗೆ ಪ್ರತಿಸ್ಪರ್ಧಿಯಾದ ಬಗೆಯನ್ನು ಹಿಂದಿನ ಅಧ್ಯಾಯಗಳಲ್ಲಿ ಚರ್ಚೆ ಮಾಡಲಾಗಿದೆ. ಅಕ್ಕನ ಬಹುದೊಡ್ಡ ಕನಸು, ನನಸು, ಸರ್ವಸ್ವ ಚೆನ್ನಮಲ್ಲಿಕಾರ್ಜುನ ಅಕ್ಕನ ಪಾಲಿಗೆ ಚೆನ್ನಮಲ್ಲಿಕಾರ್ಜುನ ಕೇವಲ ದೇವರಲ್ಲ. ಜೊತೆಗೆ ಪತಿ, ಪ್ರಿಯಕರ, ಗುರು, ಮಾರ್ಗದರ್ಶಕ ಎಲ್ಲಾ ಇವನನ್ನು ಕಾಣಲು, ಕೂಡಲು ನಡೆಸಿದ ಬಹುದೊಡ್ಡ ಹೋರಾಟವೇ ಅವಳ ಜೀವನ. ಪ್ರತಿಕ್ಷಣ ಪ್ರತಿ ಕೆಲಸದಲ್ಲಿಯೂ ಅವನನ್ನು ಕಾಣುವ ಕೂಡುವ ತವಕ, ಅವಳ ವಚನಗಳಿಂದ ವ್ಯಕ್ತವಾಗುತ್ತದೆ. ನಿರಾಕಾರ ನಿರ್ಗುಣನಾದ ಈ ವ್ಯಕ್ತಿಯನ್ನು ವಾಸ್ತವದಲ್ಲಿ ಒಲಿಸಿಕೊಳ್ಳಲು ಸಾಧ್ಯವೇ ಎಂಬ ಪ್ರಶ್ನೆ ಅಕ್ಕನನ್ನು ಕೂಡ ಕಾಡದೆ ಇಲ್ಲ. ಅದಕ್ಕೆ ಅವಳು ತನ್ನ ಚೆನ್ನಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಆಶ್ರಯಿಸಿ ಅದಕ್ಕೆ ಪರಿಹಾರವನ್ನು ಕಂಡುಕೊಂಡಿದ್ದು ಎರಡು ಅಂಶಗಳಲ್ಲಿ ಸಕಲಚರಾಚರಗಳಿಗೆ ಆಶ್ರಯ ನೀಡಿ ಎಲ್ಲಕ್ಕೂ ಚೈತನ್ಯದಾಯಕವಾಗಿರುವ ಪ್ರಕೃತಿ ಮೊದಲನೆಯದಾದರೆ ಎರಡನೆಯದು ತನುಮನ ಎಲ್ಲವನ್ನೂ ಚೆನ್ನಮಲ್ಲಿಕಾರ್ಜುನನಿಗೆ ಅರ್ಪಿಸಿಕೊಂಡ ತನ್ನಲ್ಲಿ ಅಕ್ಕ ಚೆನ್ನಮಲ್ಲಿಕಾರ್ಜುನನ ಅಸ್ತಿತ್ವದ ಹುಡುಗಾಟಕ್ಕೆ ಮುಂದಾದ ಬಗೆ ಕೂಡ ವಿಶಿಷ್ಟವಾದದ್ದೆನಿಸುತ್ತದೆ. ದೇವರು, ದೇವಾಲಯ, ಗುಡಿ, ಗೋಪುರಗಳಲ್ಲಿ ಸ್ಥಿರವಾಗಿ ಸಂಸ್ಥಾಪಿತವಾದವನು ಎಂಬ ತತ್ವಕ್ಕೆ ವಿರುದ್ಧವಾಗಿ ಅಕ್ಕ ಪ್ರಕೃತಿ ಹಾಗೂ ತನ್ನೊಳಗಿನ ಚೈತನ್ಯದಲ್ಲಿ ಚೆನ್ನಮಲ್ಲಿಕಾರ್ಜುನನ ಅಸ್ತಿತ್ವದ ಹುಡುಕಾಟಕ್ಕೆ ಮುಂದಾಗುತ್ತಾಳೆ.

ಚೆನ್ನಮಲ್ಲಿಕಾರ್ಜುನನನ್ನು ಸಾಕಾರಗೊಳಿಸಿಕೊಳ್ಳಲು ಅಕ್ಕ ಆಶ್ರಯಿಸಿದ ಪ್ರಮುಖ ಸಾಧನ ಸಕಲವನ್ನೂ ತನ್ನೊಳಗೆ ಅಡಗಿಸಿಕೊಂಡಿರುವ ಪ್ರಕೃತಿಯನ್ನು ಈ ಪ್ರಕೃತಿ ಕೇವಲ ಪ್ರಾಣಿ ಪಕ್ಷಿಗಳಿಗೆ ಗಿಡ ಮರಗಳಿಗೆ ಆಶ್ರಯ ಧಾಮವಾಗಿರದೆ ಪ್ರತಿಯೊಂದರಲ್ಲಿಯೂ ಚೆನ್ನಮಲ್ಲಿಕಾರ್ಜುನನ ಅಸ್ಥಿತ್ವವನ್ನು ತನ್ನದಾಗಿಸಿ ಅದರ ಇರುವಿಕೆಯನ್ನು ಪ್ರಚಾರ ಪಡಿಸುವ ಸಾಧನವಾಗಿದೆ. ಆದುದರಿಂದಲೇ ಅಕ್ಕ ಅಲ್ಲಿರುವ ಗಿಡ, ಮರ, ಪ್ರಾಣಿ, ಪಕ್ಷಿ, ಬೆಟ್ಟಗುಡ್ಡಗಳಲ್ಲಿ ಚೆನ್ನಮಲ್ಲಿಕಾರ್ಜುನನನ್ನು ಎಲ್ಲಿಯಾದಿರೂ ಕಂಡಿರಾ? ಕಂಡರೆ ಕರೆದು ತೋರಿರೆ ಎಂದು ಭಾವುಕವಾಗಿ ಮೊರೆಯಿಡುತ್ತಾಳೆ. ''ಅಳಿಸಂಕುಲವೆ ಮಾಮರವೆ, ಬೆಳದಿಂಗಳೆ ಕೋಗಿಲೆಯ ನಿಮ್ಮೆಲರನು ಒಂದು ಬೇಡುವನು ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ'' ಎಂದು ದೈನ್ಯವಾಗಿ ಬೇಡಿಕೊಳ್ಳುತ್ತಾಳೆ. ಈ ರೀತಿ ಬೇಡಿಕೊಳ್ಳುವ ಮೂಲಕ ನಿಸರ್ಗದ ಪ್ರತಿ ವಸ್ತುವಿನಲ್ಲಿಯೂ ಜೀವಕಳೆಯನ್ನು ಗುರುತಿಸುತ್ತಾಳೆ. ಈ ಚೈತನ್ಯದ ಸೂಕ್ಷ್ಮ ಗ್ರಹಿಕೆಯಲ್ಲಿ ಚೆನ್ನಮಲ್ಲಿಕಾರ್ಜುನನ ಇರುವಿಕೆಯನ್ನು ಹುಡುಕಲು ಪ್ರಯತ್ನಿಸುವ ಅಕ್ಕ

ಚಿಲಿ ಮಿಲಿ ಎಂದು ಓದುವ ಗಿಳಿಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಸರವೆತ್ತಿ ಪಾಡುವ ಕೋಗಿಲೆಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಎರಗಿ ಬಂದಾಡುವ ತುಂಬಿಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಕೊಳನತಡಿಯೊಳಾಡುವ ಹಂಸೆಗಳಿರಾ,
ನೀವು ಕಾಣಿರೆ, ನೀವು ಕಾಣಿರೆ.
ಗಿರಿ ಗಹ್ವರದೊಳಗಾಡುವ ನವಿಲುಗಳಿರಾ,
ನೀವು ಕಾಣಿರೆ, ನೀವು ಕಾಣಿರೆ
ಚೆನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂದು ಹೇಳಿರೆ. [೨೦]

ಎಂದು ಗಿಳಿ, ಕೋಗಿಲೆ, ದುಂಬಿ, ಹಂಸೆಗಳ ಚೈತನ್ಯದ ಎಳೆಯಲ್ಲಿ ಚೆನ್ನಮಲ್ಲಿಕಾರ್ಜುನನ ಅಸ್ತಿತ್ವವನ್ನು ಗುರುತಿಸಲು ಪ್ರಯತ್ನಿಸುತ್ತಾಳೆ. ಪ್ರಕೃತಿಗೆ ವಿಶೇಷ ಮಹತ್ವವನ್ನು ಕೊಡುವ ಅಕ್ಕ

ವನವೆಲ್ಲಾ ಕಲ್ಪತರು, ಗಿಡವೆಲ್ಲಾ ಮರುಜವಣಿ,
ಶಿಲೆಗಳೆಲ್ಲಾ ಪರುಷ, ನೆಲನೆಲ್ಲಾ ಅವಿಮುಕ್ತಿಕ್ಷೇತ್ರ
ಜಲವೆಲ್ಲಾ ನಿರ್ಜರಾಮೃತ, ಮೃಗವೆಲ್ಲಾ ಪುರುಷಾಮೃಗ
ಎಡಹುವ ಹರಳೆಲ್ಲಾ ಚಿಂತಾಮಣಿ [೨೧]

ಎಂದು ಪ್ರಕೃತಿಯ ಜೀವವಿಕಾಸದ ಶಕ್ತಿಯನ್ನು ವಿವರಿಸುತ್ತಾಳೆ. ಇಲ್ಲಿ ಚೆನ್ನಮಲ್ಲಿಕಾರ್ಜುನನೆಂಬುವನು ಬದುಕಿನ ಸಾರ್ಥಕತೆಯ ಜೀವಂತಿಕೆಯ ಸಂಕೇತ ಎಂದು ಸೂಕ್ಷ್ಮವಾಗಿ ವಿವರಿಸುತ್ತಾಳೆ. ಮತ್ತೊಂದು ಹಂತದಲ್ಲಿ ಇಡೀ ನಿಸರ್ಗವೇ ಚೆನ್ನಮಲ್ಲಿಕಾರ್ಜುನನ ವಿಶಾಲ ರೂಪ ಎಂದು ಭಾವಿಸುವ ಅಕ್ಕ ಪ್ರಕೃತಿಯ ಪ್ರತಿಯೊಂದು ವಸ್ತುವಿಗೂ ಚೈತನ್ಯ ನೀಡಿ ಅದರ ಇರುವಿಕೆಗೆ ಕಾರಣನಾಗಿರುವವನೂ ಅವನೇ ಎನ್ನುತ್ತಾಳೆ.ಆದದರಿಂದಲೇ ಪ್ರಕೃತಿಯಿಂದ ಚೆನ್ನಮಲ್ಲಿಕಾರ್ಜುನನ ವ್ಯಕ್ತಿತ್ವವನ್ನು ಅಷ್ಟುಸುಲಭವಾಗಿ ಪ್ರತ್ಯೇಕಿಸಿ ನೋಡಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ.

ವನವೆಲ್ಲಾ ನೀನೆ, ವನದೊಳಗಣ ದೇವತರುವೆಲ್ಲಾ ನೀನೆ,
ತರುವಿನೊಳಗಾಡುವ ಖಗಮೃಗೆಲ್ಲಾ ನೀನೆ.
ಚೆನ್ನಮಲ್ಲಿಕಾರ್ಜುನಾ,
ಸರ್ವಭರಿತನಾಗಿ ಎನಗೇಕೆ ಮುಖದೋರೆ? [೨೨]

ಎನ್ನುವ ಅಕ್ಕ ಪ್ರತಿಯೊಬ್ಬರಲ್ಲಿಯೂ ಅವನ ಇರುವಿಕೆಯನ್ನು ನೀರಿನ ರೂಪಕದ ಮೂಲಕ ಕಟ್ಟಿಕೊಡುತ್ತಾಳೆ. ''ಜಲವು ಹಲವು ಜಲಂಗಳ ಕೂಡಿ ತನ್ನ ಪರಿ ಬೇರಾಗದ ಹಾಗೆ ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯನು ಜಗಂಗಳ ಕೂಡಿಕೊಂಡಿದದೇನು ತನ್ನ ಪರಿ ಬೇರೆ'' ಎಂದು ಅವನ ಅಸ್ತಿತ್ವದ

---

೨೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೭೪

೨೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೯೯

೨೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೭೦೦

ಹುಡುಕಾಟಕ್ಕೆ ಮುಂದಾಗುತ್ತಾಳೆ. ಪ್ರಕೃತಿಯಲ್ಲಿ ಚೆನ್ನಮಲ್ಲಿಕಾರ್ಜುನನ ಇರುವಿಕೆಯನ್ನು ಸೂಕ್ಷ್ಮವಾಗಿ ಗ್ರಹಿಸಿದ ಅಕ್ಕ

**ನೆಲದ ಮರೆಯ ನಿಧಾನದಂತೆ**
**ಫಲದ ಮರೆಯ ರುಚಿಯಂತೆ**
**ಶಿಲೆಯ ಮರೆಯ ಹೇಮದಂತೆ**
**ತಿಲದ ಮರೆಯ ತೈಲದಂತೆ**
**ಮರದ ಮರೆಯ ತೇಜದಂತೆ**
**ಭಾವದ ಮರೆಯ ಬ್ರಹ್ಮವಾಗಿಪ್ಪ**
**ಚೆನ್ನಮಲ್ಲಿಕಾರ್ಜುನನ ನಿಲವನರಿಯಬಾರದು** [೧೩]

ಎಂದು ಪ್ರತಿಯೊಂದರಲ್ಲಿಯೂ ಇದ್ದು ಇಲ್ಲದಂತಿರುವ ಚೆನ್ನಮಲ್ಲಿಕಾರ್ಜುನನ ಅಸ್ತಿತ್ವವನ್ನು ಎಲ್ಲದರಲ್ಲಿಯೂ ಗುರುತಿಸುವುದು ಕಷ್ಟಸಾಧ್ಯ. ಅದಕ್ಕೆ ಅಸೀಮ ಶ್ರದ್ಧೆ, ನಂಬಿಕೆಗಳು ಬೇಕೆಂಬುದನ್ನು ತಿಳಿಸುತ್ತಾಳೆ. ಅಕ್ಕ ಈ ಪ್ರಕೃತಿಯಲ್ಲಿ ಚೆನ್ನಮಲ್ಲಿಕಾರ್ಜುನನನ್ನು ಹುಡುಕುವುದರೊಂದಿಗೆ ಪ್ರಕೃತಿಯ ವಿಭಿನ್ನ ಸ್ವರೂಪವನ್ನು ಸೂಕ್ಷ್ಮವಾಗಿ ಗ್ರಹಿಸಿ ಅದರ ಜೀವ ವಿಕಾಸದ ಕ್ರಮವನ್ನು ವಿವರಿಸಲು ಪ್ರಯತ್ನಿಸುತ್ತಾಳೆ. ಅಲ್ಲದೆ ದೇವಾಲಯ ಸಂಸ್ಕೃತಿಗಿಂತ ಭಿನ್ನವಾದ ನೆಲೆಯಲ್ಲಿ ದೇವರನು ಕಾಣಲು ಪ್ರಯತ್ನಿಸುವ ಅಕ್ಕ ಪ್ರಕೃತಿಯ ಚರಾಚರಗಳಲ್ಲಿದರಲ್ಲಿಯೂ ಚೆನ್ನಮಲ್ಲಿಕಾರ್ಜುನ ತನ್ನದೇ ಆದ ರೀತಿಯಲ್ಲಿ ಅಸ್ತಿತ್ವವನ್ನು ಉಳಿಸಿಕೊಂಡಿದ್ದಾನೆ ಎನ್ನುವುದರ ಮೂಲಕ ದೇವರ ಬಗೆಗಿನ ಸಾಂಪ್ರದಾಯಿಕ ನಂಬಿಕೆಗಳನ್ನು ಅಲ್ಲಗಳೆಯುತ್ತಾಳೆ.

ಮತ್ತೊಂದು ಹಂತದಲ್ಲಿ ಅಕ್ಕ ಚೆನ್ನಮಲ್ಲಿಕಾರ್ಜುನನ ಹುಡುಕಾಟಕ್ಕೆ ಮುಂದಾಗುವುದು ತನ್ನ ವ್ಯಕ್ತಿತ್ವದ ಅಂತರಾಳದಲ್ಲಿ. ಮೊದಲೇ ತಿಳಿಸಿದಂತೆ ಚೆನ್ನಮಲ್ಲಿಕಾರ್ಜುನ ಕೇವಲ ವ್ಯಕ್ತಿಯಲ್ಲ ಇಡೀ ಸಮಷ್ಟಿ ಪ್ರಜ್ಞೆ, ಸಮುದಾಯ ಚಿಂತನೆಯ ಶಕ್ತಿ ಸ್ವರೂಪ. ಇಂತಹ ವ್ಯಕ್ತಿಯನ್ನು ಒಲಿಸಿಕೊಳ್ಳುವುದೆಂದರೆ ಆಸಾಧ್ಯವಾದದ್ದು ಆದುದರಿಂದ ಆ ಶಕ್ತಿಯನ್ನು ಒಲಿಸಿಕೊಳ್ಳುವುದಕ್ಕಿಂತ ಮೈಗೂಡಿಸಿಕೊಳ್ಳಲು ಮುಂದಾಗುತ್ತಾಳೆ. ಕೇವಲ ಪೂಜೆ ಪುನಸ್ಕಾರಗಳಿಂದ ಚೆನ್ನಮಲ್ಲಿಕಾರ್ಜುನನನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲವೆಂದು

**ಅಷ್ಟವಿಧಾರ್ಚನೆಯ ಮಾಡಿ ಒಲಿಸುವೆನೆ ಅಯ್ಯಾ?**
**ನೀನು ಬಹಿರಂಗವ್ಯವಹಾರ ದೂರಸ್ಥನು.**
**ಅಂತರಂಗದಲ್ಲಿ ಧ್ಯಾನವ ಮಾಡಿ ಒಲಿಸುವೆನೆ ಅಯ್ಯಾ?**
**ನೀನು ವಾಙ್ಮನಕ್ಕತೀತನು ಜಪಸ್ತೋತ್ರದಿಂದ ಒಲಿಸುವೆನೆ ಅಯ್ಯಾ?**
**ನೀನು ನಾದಾತೀತನು**
**ಭಾವಜ್ಞಾನದಿಂದ ಒಲುಸುವೆನೆ ಅಯ್ಯಾ?**
**ನೀನು ಮತಿಗತೀತನು.**
**ಹೃದಯ ಕಮಲ ಮಧ್ಯದಲ್ಲಿ ಇಂಬಿಟ್ಟುಕೊಂಬೆನೆ ಅಯ್ಯಾ?**
**ನೀನು ಸರ್ವಾಂಗ ಪರಿಪೂರ್ಣನು** [೧೪]

---

೧೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೧೭

೧೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೮೨

ಎಂದು ತನ್ನ ಸರ್ವಾಂಗದಲ್ಲಿ ಸಂಪೂರ್ಣವಾಗಿ ವ್ಯಾಪಿಸುವ ಚೈತನ್ಯದಾಯಕ ಶಕ್ತಿಯೇ ಚೆನ್ನಮಲ್ಲಿಕಾರ್ಜುನ ಎಂದು ಮಾರ್ಮಿಕವಾಗಿ ನುಡಿಯುತ್ತಾಳೆ. ಬಸವಣ್ಣನ ದೇಹವೇ ದೇವಾಲಯ ಎಂಬ ಸಿದ್ಧಾಂತಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ದೇಹವೇ ದೇವರು ಎಂದು ತನ್ನಲ್ಲಿಯೇ ಚೆನ್ನಮಲ್ಲಿಕಾರ್ಜುನನನ್ನು ಹುಡುಕಲು ಮುಂದಾಗುತ್ತಾಳೆ.

ಚೆನ್ನಮಲ್ಲಿಕಾರ್ಜುನ ಅಕ್ಕನಲ್ಲಿ ಐಕ್ಯಗೊಂಡ ಬಗೆ ವಿಶೇಷ ಅವನು ಯಾವುದೇ ಒಂದು ರೂಪದಲ್ಲಿ ಐಕ್ಯವಾಗದೆ ಅಕ್ಕನ ಸರ್ವಾಂಗದಲ್ಲಿ ಸಂಪೂರ್ಣವಾಗಿ ನೆಲೆಗೊಂಡಿದ್ದಾನೆ. ಅವಳ ತನು, ಮನ, ಎಲ್ಲವನ್ನು ಆವರಿಸಿಕೊಂಡು ನಂತರ ಅವಳ ಪರಿವರ್ತನೆಗೆ ಕಾರಣನಾಗಿದ್ದಾನೆ. ಆದುದರಿಂದ ಅಕ್ಕ ''ಎನ್ನಮನವ ಮಾರುಗೊಂಡನವ್ವಾ ಎನ್ನತನುವ ಸೂರೆಗೊಂಡನವ್ವಾ ಎನ್ನ ಸುಖದನೊಪ್ಪಗೊಂಡನವ್ವಾ, ಎನ್ನ ಇರವ ಇಂಬುಗೊಂಡನವ್ವಾ'' ಎಂದು ತನ್ನಲ್ಲಿ ಸಂಪೂರ್ಣ ಆವರಿಸಿರುವ ಚೆನ್ನಮಲ್ಲಿಕಾರ್ಜುನನ ರೂಪವನ್ನು ವಿವರಿಸುತ್ತಾಳೆ ಅಲ್ಲದೆ ಅಕ್ಕನನ್ನು ಸಂಪೂರ್ಣವಾಗಿ ಅರಿತ ವ್ಯಕ್ತಿ ಕೂಡ ಇವನೇ ಆದದರಿಂದಲೇ ತನ್ನೆಲ್ಲವನ್ನು ಅವನಿಗೆ ಅರ್ಪಿಸಿಕೊಂಡ ಅಕ್ಕ ಈ ರೀತಿ ಹೇಳುತ್ತಾಳೆ.

> ತನು ನಿಮ್ಮ ರೂಪಾದ ಬಳಿಕ
> ಆರಿಗೆ ಮಾಡುವೆ?
> ಮನ ನಿಮ್ಮ ರೂಪಾದ ಬಳಿಕ
> ಆರ ನೆನೆವೆ?
> ಪ್ರಾಣ ನಿಮ್ಮ ರೂಪಾದ ಬಳಿಕ
> ಆರನಾರಾಧಿಸುವೆ?
> ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ
> ಆರನರಿವೆ?[೧೫]

ಎಂದು ತನು, ಮನ, ಪ್ರಾಣ ಎಲ್ಲದರಲ್ಲಿಯೂ ಬೆರೆತು ಒಂದಾಗಿರುವ ಚೆನ್ನಮಲ್ಲಿಕಾರ್ಜುನನನ್ನು ಹುಡುಕುವುದು ಸ್ವಲ್ಪ ಕಷ್ಟವೆನಿಸಿದಾಗ ಅವಳು ಮತ್ತು ಚೆನ್ನಮಲ್ಲಿಕಾರ್ಜುನನ ಮೊರೆ ಹೋಗುತ್ತಾಳೆ. ನಿನ್ನ ಇರವನ್ನು ಅರಿಯುವ ಪರಿ ಹೇಗೆ ಎಂದು ವಿಧವಿಧವಾಗಿ ಹಲುಬಿ ಹಂಬಲಿಸುತ್ತಾಳೆ.

> ಅಯ್ಯಾ, ನಿನ್ನ ಮುಟ್ಟಿಮುಟ್ಟದೆನ್ನ ಮನ ನೋಡಾ.
> ಬಿಚ್ಚಿ ಬೇಸರವಾಯಿತ್ತೆನ್ನ ಮನ.
> ಹೊಳಲ ಸುಂಕಿಗನಂತೆ ಹೊದಕುಳಿಗೊಂಡಿತ್ತೆನ್ನ ಮನ.
> ಎರಡೆಂಬುದ ಮರೆದು ಬರಡಾಗದೆನ್ನ ಮನ.
> ನೀನು. ಆನಪ್ಪ ಪರಿಯೆಂತು ಹೇಳಾ, ಚೆನ್ನಮಲ್ಲಿಕಾರ್ಜುನಾ?[೧೬]

ಎಂದು ನೀನು ನಾನು ಬೇರೆ ಅಲ್ಲ, ನೀನು ನಾನಾಗುವ ಬಗೆಯನ್ನು ತೋರಿಸು ಎಂದು ಮೊರೆಯಿಡುತ್ತಾಳೆ.

---

೧೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೮೦

೧೬. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೦

ಯಾವ ಹಂತದಲ್ಲಿಯೂ ಕೂಡ ಅಕ್ಕನಿಗೆ ಚೆನ್ನಮಲ್ಲಿಕಾರ್ಜುನ ಅವಳಿಗಿಂತ ಸಂಪೂರ್ಣ ಭಿನ್ನ ಎಂದಾಗಲೀ ಶ್ರೇಷ್ಠ ವ್ಯಕ್ತಿತ್ವ ಎಂದಾಗಲೀ ಎನಿಸುವುದಿಲ್ಲ ಏಕೆಂದರೆ ಅವನೆಲ್ಲ ಗುಣಗಳನ್ನು ಮೆಚ್ಚಿ ಹೊಗಳುವ ಅಕ್ಕ ಆ ಗುಣಗಳು ತನ್ನಲ್ಲಿಯೂ ಬೆಳೆಯಲು ಸಾಧ್ಯ ಎಂಬ ಆತ್ಮವಿಶ್ವಾಸವನ್ನು ಹೊಂದಿದ್ದಾಳೆ. ಆದುದರಿಂದಲೇ ನೀನು ಆನಾಗುವ ಪರಿಯೆಂತು ಎಂದು ಧೈರ್ಯವಾಗಿ ಕೇಳುತ್ತಾಳೆ.

ಚೆನ್ನಮಲ್ಲಿಕಾರ್ಜುನನನ್ನು ಅರಿಯುವುದಕ್ಕೆ ಮುಂಚೆ ತನ್ನನ್ನು ತಾನು ಸಂಪೂರ್ಣ ಅರಿತುಕೊಳ್ಳಬೇಕು. ಆಗ ಮಾತ್ರ ಚೆನ್ನಮಲ್ಲಿಕಾರ್ಜುನನ ಇರುವಿಕೆಯನ್ನು ತಿಳಿಯಲು ಸಾಧ್ಯ ಎನ್ನುವ ಅಕ್ಕ

**ಎನ್ನ ನಾನರಿಯದಲ್ಲಿ ಎಲ್ಲಿರ್ದೆ ಹೇಳಯ್ಯಾ?**
**ಚಿನ್ನದೊಳಗಣ ಬಣ್ಣದಂತೆ ಎನ್ನೊಳಗಿರ್ದೆ.**
**ಅಯ್ಯಾ ಎನ್ನೊಳಗೆ ಇನಿತಿರ್ದು ಮೈದೋರದ ಭೇದವ**
**ನಿಮ್ಮಲ್ಲಿ ಕಂಡೆ ಕಾಣಾ ಚೆನ್ನಮಲ್ಲಿಕಾರ್ಜುನಾ** [೧೭]

ಎಂದು ನೆಲದ ಮರೆಯ ನಿಧಾನದಂತೆ ಫಲದ ಮರೆಯ ರುಚಿಯಂತೆ ಪ್ರಕೃತಿಯಲ್ಲಿ ಅಡಗಿರುವ ಚೆನ್ನಮಲ್ಲಿಕಾರ್ಜುನ ತನ್ನಲ್ಲಿಯೂ ಕೂಡ ಚಿನ್ನದ ಮರೆಯ ಬಣ್ಣದಂತೆ ಕಂಡೂ ಕಾಣದ ರೀತಿಯಲ್ಲಿ ಅಡಗಿದ್ದಾನೆ ಎನ್ನುತ್ತಾಳೆ. ಚೆನ್ನಮಲ್ಲಿಕಾರ್ಜುನನನ್ನು ತನ್ನಲ್ಲಿ ಹುಡುಕುವ ಮೂಲಕ ಅವನ ಎಲ್ಲಾ ಗುಣಗಳನ್ನು ತನ್ನೊಳಗೆ ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಚೆನ್ನಮಲ್ಲಿಕಾರ್ಜುನ ಮಾತ್ರವಲ್ಲದೆ ಇಡೀ ಲೋಕವೇ ತನ್ನೊಳಗೆ ಅಡಗಿದೆ ಎಂದು ಹೆಮ್ಮೆ ಪಡುವ ಅಕ್ಕ "ಲೋಕವೇ ತಾನಾದ ಬಳಿಕ ಏಕಾಂತದ ಹಂಗೇಕಯ್ಯಾ"ಎಂದು ತಾನು ಸಂಪೂರ್ಣ ಚೆನ್ನಮಲ್ಲಿಕಾರ್ಜುನನ ಪರಾಧೀನವಾಗಿಲ್ಲದೆ ಅವನೂ ಕೂಡ ತನ್ನಲ್ಲಿ ಸರ್ವಸ್ವವನ್ನು ಅಡಗಿಸಿಕೊಂಡಿದ್ದಾನೆ ಎಂದು ತಾನು ಮತ್ತು ಚೆನ್ನಮಲ್ಲಿಕಾರ್ಜುನ ಇಬ್ಬರೂ ಬೇರೆ ಬೇರೆಯಲ್ಲಿ ಎರಡಳಿದು ಒಂದಾದ ಮಹತ್ವದ ಸ್ಥಿತಿ ಎಂದು ಹೇಳುತ್ತಾಳೆ.

ಈ ರೀತಿ ಅಕ್ಕ ತನ್ನಲ್ಲಿಯೇ ಚೆನ್ನಮಲ್ಲಿಕಾರ್ಜುನನನ್ನು ಹುಡುಕುವ ಮೂಲಕ ಆ ಎಲ್ಲಾ ಗುಣಗಳನ್ನು ಹೊಂದುವ ದಿಟ್ಟತನವನ್ನು ವ್ಯಕ್ತಪಡಿಸುತ್ತಾಳೆ. ಅವಳ ಈ ದಿಟ್ಟ ಹೆಜ್ಜೆ ಪುರುಷ ಪ್ರಧಾನ ವ್ಯವಸ್ಥೆ ಹೆಣ್ಣಿನ ಸಾಮರ್ಥ್ಯದ ಬಗೆಗೆ ಇಟ್ಟಿದ್ದ ನಂಬಿಕೆಗಳನ್ನು ಅಲ್ಲಗಳೆದು, ಅವಳ ದೈಹಿಕ ಮತ್ತು ಮಾನಸಿಕ ಸಾಮರ್ಥ್ಯದ ಶ್ರೇಷ್ಠತೆಯನ್ನು ಪ್ರಚಾರ ಪಡಿಸುತ್ತದೆ. ಒಟ್ಟಾರೆ ಅಕ್ಕ ಲೌಕಿಕದ ಎಲ್ಲಾ ಸಂಬಂಧಗಳನ್ನು ಮೀರುವುದರ ಜೊತೆಗೆ ಲೌಕಿಕದ ಗಂಡನ ನಿರಾಕರಣೆಗೆ ಕೂಡ ಮುಂದಾಗುತ್ತಾಳೆ. ಈ ಮೂಲಕ ತನ್ನ ಸ್ವಂತ ಅಸ್ತಿತ್ವ ಹಾಗೂ ಪ್ರಭುದ್ಧತೆಯನ್ನು ಮೆರೆಯುತ್ತಾಳೆ. ಚೆನ್ನಮಲ್ಲಿಕಾರ್ಜುನನನ್ನು ಗಂಡನನ್ನಾಗಿ ಸ್ವೀಕರಿಸುವುದರ ಮೂಲಕ ಲೌಕಿಕದ ಎಲ್ಲಾ ಬಂಧನಗಳಿಂದ ವಿಮುಕ್ತಳಾಗಿ ಅದರ ಬಗೆಗೆ ತನಗಿದ್ದ ಬೇಸರ ಹೇಸಿಕೆಗಳನ್ನು ವ್ಯಕ್ತಪಡಿಸುತ್ತಾಳೆ.

---

೧೭. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೮೧

# ಇ. ಸಿದ್ಧ ಮಾದರಿಗಳ ನಿರಾಕರಣೆ

ಅಕ್ಕನ ವಚನಗಳಲ್ಲಿ ಕಂಡು ಬರುವ ಸಿದ್ಧ ಮಾದರಿಗಳ ನಿರಾಕರಣೆ ಕ್ರಮವನ್ನು ಅರಿಯುವುದಕ್ಕೆ ಮುಂಚೆ ಸಿದ್ಧ ಮಾದರಿಗಳು ಎಂದರೇನು? ಎಂಬುದನ್ನು ಅರಿಯುವುದು ಮುಖ್ಯ ಎಂದೆನಿಸುತ್ತದೆ. ಲೋಕ ಒಪ್ಪಿತ ಸಮಾಜ ತನ್ನದೇ ಆದ ಮೌಲ್ಯ ನಿರ್ಣಯದ ಆಧಾರದ ಮೇಲೆ ಕೆಲವು ವ್ಯವಸ್ಥೆಯನ್ನು ರೂಪಿಸಿ, ಅದಕ್ಕೆ ತನ್ನದೇ ಆದ ರೂಪು ರೇಷೆಗಳನ್ನೂ ಸಹ ನೀಡುತ್ತದೆ. ಎಲ್ಲರೂ ಈ ವ್ಯವಸ್ಥೆಯ ಅಡಿಯಲ್ಲಿ ಅದರ ಕಟ್ಟುಪಾಡುಗಳ ಆಧಾರದ ಮೇಲೆ ಜೀವನ ನಡೆಸಬೇಕೆಂಬ ನಿರ್ಬಂಧವನ್ನು ಹೇರುತ್ತವೆ. ಅಲ್ಲದೆ ಇದೇ ಸರಿಯೆಂಬ ಭಾವನೆ ಜನರಲ್ಲಿ ಮೂಡುವಂತೆ ಒತ್ತಾಯಪೂರ್ವಕವಾಗಿ ಆ ವ್ಯವಸ್ಥೆಯನ್ನು ಹೇರಲಾಗುತ್ತದೆ. ಇದು ಪ್ರಭುತ್ವವಾದಿಗಳು, ಬಹುಸಂಖ್ಯಾತರು, ಮೇಲ್ವರ್ಗದವರು ಮತ್ತು ಪುರೋಹಿತ ಶಾಹಿ ವರ್ಗದವರು ತಮ್ಮ ಅನುಕೂಲಕ್ಕಾಗಿ ರೂಪಿಸಿಕೊಂಡ ವ್ಯವಸ್ಥೆಯಾಗಿದ್ದು ಇತರರ ಮೇಲೆ ಅದನ್ನು ಬಲವಂತವಾಗಿ, ಒತ್ತಾಯಪೂರ್ವಕವಾಗಿ ಹೇರುತ್ತಾ, ಈ ವ್ಯವಸ್ಥೆಯೊಳಗಿನ ಆಚರಣೆಗಳಿಗೆ ನಿರ್ದಿಷ್ಟ ಅರ್ಥದ ಚೌಕಟ್ಟನ್ನು ನಿರ್ಮಿಸಿದ್ದಾರೆ. ಈ ರೀತಿ ರೂಪಿತವಾದ ವ್ಯವಸ್ಥೆಯ ಭಾಗಗಳೇ ಸಂಸಾರ, ಕುಟುಂಬ, ಸಮಾಜ, ನೈತಿಕತೆ, ಗಂಡ, ಮನೆ, ಮಕ್ಕಳು ಇತ್ಯಾದಿ. ಉದಾ : ಕುಟುಂಬ ಎಂದರೆ ತನ್ನ ರಕ್ತಸಂಬಂಧಿಗಳು ತೀರಾ ಹತ್ತಿರದ ಬಂಧು ಬಾಂಧವರು ಕೂಡಿಕೊಂಡಿರುವ ಪುಟ್ಟಸಮುದಾಯ ಎಂಬುದು ಲೋಕ ಒಪ್ಪಿತ ಮೌಲ್ಯ. ಈ ಮೌಲ್ಯವನ್ನು ನಿರಾಕರಿಸಿ, ವಿಶ್ವ ಕುಟುಂಬದ ಪರಿಕಲ್ಪನೆಯನ್ನು ಕಟ್ಟಿಕೊಡುತ್ತಾಳೆ ಅಕ್ಕ. ಇಷ್ಟೇ ಅಲ್ಲದೆ ಸಮಾಜದ ಪ್ರತಿಯೊಂದು ವ್ಯವಸ್ಥೆಯನ್ನು ಕೂಡ ಧಿಕ್ಕರಿಸುವ ಮನೋಭಾವ ಅವಳದು. ಒಟ್ಟಾರೆ ಹಿಂದಿನಿಂದ ಆಚರಿಸಿಕೊಂಡು ಬಂದಿದ್ದ ಸಾಂಪ್ರದಾಯಿಕ ಮೌಲ್ಯ ವ್ಯವಸ್ಥೆಯನ್ನು ಮೀರುವ ಕ್ರಮವನ್ನೇ ಸಿದ್ಧಮಾದರಿಗಳ ನಿರಾಕರಣೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ಅಕ್ಕನ ವಚನಗಳಲ್ಲಿ ಕಂಡುಬರುವ ನಿರಾಕರಣ ಕ್ರಮವನ್ನು ಕುರಿತು ಚರ್ಚಿಸಲಾಗಿದೆ. ಇದನ್ನು ಎರಡು ರೀತಿಯಲ್ಲಿ ಗುರುತಿಸಬಹುದು.

★ ಸಾಮಾಜಿಕ ಸಂಬಂಧಗಳ ನಿರಾಕರಣೆ.

★ ಸಾಮಾಜಿಕ ಮೌಲ್ಯಗಳ ನಿರಾಕರಣೆ

ಅಕ್ಕನ ಬದುಕು, ಬರಹ ಸಂಪೂರ್ಣವಾಗಿ ಸಮಾಜದ ಸ್ಥಾಪಿತ ಮೌಲ್ಯಗಳ ವಿರುದ್ಧ ಆರಂಭಿಸಿದ ತೀವ್ರ ಹೋರಾಟದ ಪ್ರತಿಬಿಂಬವಾಗಿದೆ. ಅವಳು ತನ್ನ ಜೀವನದ ಪ್ರತಿ ಹಂತದಲ್ಲಿಯೂ ಸಮಾಜದ ಪೂರ್ವ ಕಲ್ಪಿತ ನಂಬಿಕೆಗಳ ವಿರುದ್ಧ ಪ್ರತಿಭಟನೆಯನ್ನು ಆರಂಭಿಸಿದಳು. ಮಾತ್ರವಲ್ಲದೆ

ಸಿದ್ಧ ಮಾದರಿಗಳನ್ನು ಮುರಿದು ಕಟ್ಟುವ ಪ್ರಯತ್ನವನ್ನು ಮಾಡಿದಳು. ಈ ಹಿನ್ನೆಲೆಯಲ್ಲಿ ಅವಳ ಜೀವನವೇ ಒಂದು ಬಗೆಯ ಪ್ರತಿ ಸಂಸ್ಕೃತಿ ಸಮಾಜ ನಿರ್ಮಾಣದ ಮಾದರಿಯದ್ದಾಗಿದೆ. ಅಕ್ಕ ತನ್ನ ಜೀವನದಲ್ಲಿ ಎದುರಾದ ಸಮಸ್ಯೆಗಳಿಗೆ ಪ್ರತಿಕ್ರಿಯಿಸಿದ ಬಗೆ ಕೂಡ ಭಿನ್ನ ರೀತಿಯದ್ದು. ಲೋಕ ಒಪ್ಪಿತ ಸಂಸಾರ, ಗಂಡ, ಮದುವೆ, ಜೀವನ ಎಲ್ಲಾ ಪರಿಕಲ್ಪನೆಗಳನ್ನು ತಿರಸ್ಕರಿಸಿದ ಅಕ್ಕ ತನ್ನದೇ ಆದ ರೀತಿಯಲ್ಲಿ ಮಾದರಿ ಸಮಾಜ ನಿರ್ಮಾಣದ ಕನಸು ಕಾಣುತ್ತಾಳೆ. ಅಲ್ಲದೆ ಅದನ್ನು ನನಸಾಗಿಸಿಕೊಳ್ಳಲು ತನ್ನ ಜೀವನವನ್ನೇ ಮುಡಿಪಾಗಿಡುತ್ತಾಳೆ. ಜೊತೆಗೆ ಭಕ್ತಿ, ಗುರು, ವಿರಕ್ತಿ, ಕಾಯ, ಅಂಗ-ಲಿಂಗ ಸಂಬಂಧ, ವೇದ, ಆಗಮ, ಪುರಾಣಗಳ ಪುನರ್ ವಿಮರ್ಶೆಗೆ ಮುಂದಾಗುತ್ತಾಳೆ. ಅವಳ ಈ ಕ್ರಮ ಸಮಾಜದ ಸಿದ್ಧ ಮಾದರಿಗಳನ್ನು ವಿಮರ್ಶೆಗೆ ಒಳಪಡಿಸುವುದರೊಂದಿಗೆ ಅವುಗಳ ನಿರಾಕರಣಾ ಪ್ರಕ್ರಿಯೆಯನ್ನು ಬಿಚ್ಚಿಡುತ್ತದೆ.

ಅಕ್ಕನ ಸಾಮಾಜಿಕ ಸಂಬಂಧಗಳ ನಿರಾಕರಣ ಕ್ರಮವನ್ನು ಹಿಂದಿನ ಅಧ್ಯಾಯಗಳಲ್ಲಿ ಅಧ್ಯಯನ ಮಾಡಲಾಗಿದೆ. ಅದರ ಸಂಕ್ಷಿಪ್ತ ವಿವರವನ್ನು ಇಲ್ಲಿ ಗಮನಿಸಬಹುದು. ಅಕ್ಕನ ವಚನಗಳಲ್ಲಿ ಕಂಡುಬರುವ ಸಂಸಾರದ ನಿರಾಕರಣೆ ಲೋಕ ಒಪ್ಪಿತ ಸಿದ್ಧ ಮಾದರಿ ಸಂಸಾರದ ಸ್ವರೂಪದ್ದಾಗಿದೆ. ಈ ಸ್ವರೂಪದ ವಿಮರ್ಶೆಗೆ ಮುಂದಾಗುವ ಅಕ್ಕ ಅದರ ಲೋಪ-ದೋಷಗಳನ್ನು ಎತ್ತಿ ಹಿಡಿಯುತ್ತಾಳೆ. ಅಹಂಮ್ಮಿಕೆ, ದರ್ಪ, ದೌರ್ಜನ್ಯದ ನೆಲೆವೀಡಾದ ಈ ಸಂಸಾರದ ಬಗೆಗೆ ಸಂಪೂರ್ಣ ನಿರ್ಲಕ್ಷ್ಯವನ್ನು ತೋರುವ ಜೊತೆ ಜೊತೆಯಲ್ಲಿಯೇ ಇವೆಲ್ಲವುದರಿಂದ ಮುಕ್ತವಾದ ಮಾದರಿ ಸಂಸಾರದ ನಿರ್ಮಿತಿಗೆ ತೊಡಗುತ್ತಾಳೆ. ಅವಳ ಈ ಲೌಕಿಕ ಸಂಸಾರದ ನಿರಾಕರಣೆಯಿಂದ ರೂಪುಗೊಂಡಿದ್ದೇ ಮೌಲ್ಯಯುತವಾದ, ಆದರ್ಶೀಕೃತಗೊಂಡ ಪರಮಾರ್ಥಿಕ ಸಂಸಾರದ ಪರಿಕಲ್ಪನೆ. ಲೌಕಿಕದೊಂದಿಗಿನ ಬೆಸುಗೆಯ ಕೊಂಡಿಯಾದ ಸಂಸಾರ ಬಂಧವನ್ನು ನಿರಾಕರಿಸುವುದರ ಮೂಲಕ ಅಕ್ಕ ಲೌಕಿಕದ ಎಲ್ಲಾ ಬಂಧನಗಳಿಂದ ಮುಕ್ತಳಾಗುತ್ತಾಳೆ. ಅಕ್ಕ ಒಪ್ಪುವ ಸಾಂಸಾರಿಕ ಸಂಬಂಧಗಳೆಲ್ಲವೂ ಕೂಡ ಚೆನ್ನಮಲ್ಲಿಕಾರ್ಜುನನ್ನು ಕೇಂದ್ರವಾಗಿಸಿಕೊಂಡ ರೂಪುಗೊಂಡಂತಹವುಗಳಾಗಿವೆ. ಈ ಹಿನ್ನೆಲೆಯಲ್ಲಿ ಅಕ್ಕನ ಸಂಸಾರ ನಿರಾಕರಣೆ ಕೇವಲ ಲೌಕಿಕದ, ರೂಢಿಗತ, ಸಂಪ್ರದಾಯಬದ್ಧವಾದ ವ್ಯವಸ್ಥೆಯ ಬಗೆಗೇ ವಿನಃ ಸಂಸಾರ ಪರಿಕಲ್ಪನೆಗೆ ಅನ್ವಯಿಸುವುದಿಲ್ಲ.

ಅಕ್ಕನ ಸಾಮಾಜಿಕ ಸಂಬಂಧಗಳ ನಿರಾಕರಣ ಕ್ರಮವನ್ನು ಹಿಂದಿನ ಅಧ್ಯಾಯಗಳಲ್ಲಿ ಅಧ್ಯಯನ ಮಾಡಲಾಗಿದೆ. ಅದರ ಸಂಕ್ಷಿಪ್ತ ವಿವರವನ್ನು ಇಲ್ಲಿ ಗಮನಿಸಬಹುದು. ಅಕ್ಕನ ವಚನಗಳಲ್ಲಿ ಕಂಡುಬರುವ ಸಂಸಾರದ ನಿರಾಕರಣೆ ಲೋಕ ಒಪ್ಪಿತ ಸಿದ್ಧ ಮಾದರಿ ಸಂಸಾರದ ಸ್ವರೂಪದ್ದಾಗಿದೆ. ಈ ಸ್ವರೂಪದ ವಿಮರ್ಶೆಗೆ ಮುಂದಾಗುವ ಅಕ್ಕ ಅದರ ಲೋಪ ದೋಷಗಳನ್ನು ಎತ್ತಿ ಹಿಡಿಯುತ್ತಾಳೆ. ಅಹಂಮ್ಮಿಕೆ, ದರ್ಪ, ದೌರ್ಜನ್ಯದ ನೆಲೆವೀಡಾದ ಈ ಸಂಸಾರದ ಬಗೆಗೆ ಸಂಪೂರ್ಣ ನಿರ್ಲಕ್ಷ್ಯವನ್ನು ತೋರುವ ಜೊತೆ ಜೊತೆಯಲ್ಲಿಯೇ ಇವೆಲ್ಲದರಿಂದ ಮುಕ್ತವಾದ ಮಾದರಿ ಸಂಸಾರದ ನಿರ್ಮಿತಿಗೆ ತೊಡಗುತ್ತಾಳೆ. ಅವಳ ಈ ಲೌಕಿಕ ಸಂಸಾರದ ನಿರಾಕರಣೆಯಿಂದ ರೂಪುಗೊಂಡಿದ್ದೇ ಮೌಲ್ಯಯುತವಾದ, ಆದರ್ಶೀಕೃತಗೊಂಡ, ಪಾರಮಾರ್ಥಿಕ ಸಂಸಾರದ ಪರಿಕಲ್ಪನೆ. ಲೌಕಿಕದೊಂದಿಗಿನ ಬೆಸುಗೆಯ ಕೊಂಡಿಯಾದ ಸಂಸಾರ ಬಂಧನವನ್ನು ನಿರಾಕರಿಸುವುದರ ಮೂಲಕ ಅಕ್ಕ ಲೌಕಿಕದ ಎಲ್ಲಾ ಸಂಬಂಧಗಳಿಂದ ಮುಕ್ತಳಾಗುತ್ತಾಳೆ. ಅಕ್ಕ ಒಪ್ಪುವ ಸಾಂಸಾರಿಕ ಸಂಬಂಧಗಳೆಲ್ಲವೂ ಕೂಡ ಚೆನ್ನಮಲ್ಲಿಕಾರ್ಜುನನ್ನು ಕೇಂದ್ರವಾಗಿಸಿಕೊಂಡು ರೂಪುಗೊಂಡಂತಹವುಗಳಾಗಿವೆ. ಈ ಹಿನ್ನೆಲೆಯಲ್ಲಿ

ಅಕ್ಕನ ಸಂಸಾರ ನಿರಾಕರಣೆ ಕೇವಲ ಲೌಕಿಕದ, ರೂಢಿಗತ, ಸಂಪ್ರದಾಯಬದ್ಧವಾದ ವ್ಯವಸ್ಥೆಯ ಬಗೆಗೆ ವಿನಃ ಸಂಸಾರ ಪರಿಕಲ್ಪನೆಗೆ ಅನ್ವಯಿಸುವುದಿಲ್ಲ.

ಅಕ್ಕನ ಗಂಡ, ಮದುವೆ, ದಾಂಪತ್ಯದ ನಿರಾಕರಣೆಯಲ್ಲೂ ಕೂಡ ಇದೇ ವಿಧಾನವನ್ನು ಕಾಣಬಹುದು ಲೌಕಿಕದ ಗಂಡಿನ ಸ್ವರೂಪವೇ ಅವನ ನಿರಾಕರಣೆಗೆ ಕಾರಣವೆನ್ನುವ ಅಕ್ಕ ಚೆನ್ನಮಲ್ಲಿಕಾರ್ಜುನನ ರೂಪಕದ ಮೂಲಕ ಲೋಕದ ಹಾಗೂ ತಾನು ಮೆಚ್ಚುವ ಗಂಡಿನ ನಡುವಿನ ವ್ಯತ್ಯಾಸವನ್ನು ಗುರುತಿಸುತ್ತಾಳೆ. ಅಹಂಮ್ಮಿಕೆ ಹಾಗೂ ಪ್ರಭುತ್ವದ ಸಂಕೇತವಾದ ಲೋಕದ ಗಂಡಿನ ವ್ಯಕ್ತಿತ್ವದ ಬಗೆಗೆ ತಿರಸ್ಕಾರವನ್ನು ವ್ಯಕ್ತಪಡಿಸುತ್ತಾಳೆ. ಅವನ ಸ್ವರೂಪವನ್ನು ಸಂಪೂರ್ಣವಾಗಿ ನಿರಾಕರಿಸುತ್ತಾಳೆ. ಅಕ್ಕನ ವಚನಗಳಲ್ಲಿ ಬರುವ ಮದುವೆಯ ಕಲ್ಪನೆಯನ್ನು ವಾಸ್ತವದಲ್ಲಿ ಕಾಣಲು ಸಾಧ್ಯವಿಲ್ಲ. ''ಪಚ್ಚೆಯದ ನೆಲೆಗಟ್ಟು, ಕನಕನ ತೋರಣ, ವಜ್ರದ ಕಂಬ, ಪವಳದ ಚಪ್ಪರ, ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ' ಎಲ್ಲವೂ ಅವಾಸ್ತವೆನಿಸಿದರೂ ಕೂಡ ಲೋಕ ಒಪ್ಪಿದ ಸಿದ್ಧ ಮಾದರಿಯ ಮದುವೆಯ ಚಿತ್ರಣಕ್ಕೆ ಪ್ರತಿರೂಪವಾಗಿ ಈ ವಿವಾಹದ ವರ್ಣನೆ ಬಂದಿವೆ. ಅಕ್ಕ ಚೆನ್ನಮಲ್ಲಿಕಾರ್ಜುನನೊಂದಿಗೆ ಇರಿಸಿಕೊಂಡಿರುವ ಸಂಬಂಧ ಕೂಡ ಭಿನ್ನ ಸ್ವರೂಪದ್ದು. ''ಕರ್ಮವೆಂಬ ಗಂಡನ ಬಾಯ ಟೊಣೆದು ಹಾದರವನಾಡುವೆನು ಹರನ ಕೂಡೆ'', ''ಮಿಂಡ ಮಲ್ಲಿನಾಥ'', ''ಒಳಗಣ ಗಂಡನಯ್ಯಾ ಹೊರಗಣ ಮಿಂಡನಯ್ಯಾ'' ಎಂಬ ಮಾತುಗಳನ್ನು ಗಮನಿಸಿದಾಗ ಲೋಕ ತಿರಸ್ಕರಿಸುವ ಗಂಡು ಹೆಣ್ಣಿನ ಸಂಬಂಧವನ್ನು ಅಕ್ಕ ಸ್ವೀಕರಿಸುವ ಬಗೆ ವ್ಯಕ್ತವಾಗುತ್ತದೆ. ಈ ರೀತಿ ಅಕ್ಕ ಪ್ರತಿ ಹಂತದಲ್ಲಿಯೂ ಲೋಕ ಒಪ್ಪಿದುದನ್ನು ನಿರಾಕರಿಸಿ, ನಿರಾಕರಿಸಿದುದನ್ನು ಸ್ವೀಕರಿಸುವ ಮೂಲಕ ಸಮಾಜದೊಂದಿಗೆ ಪ್ರತಿಭಟನೆಗೆ ಮುಂದಾಗುತ್ತಾಳೆ.

ಲೋಕ ಒಪ್ಪಿದ ಸಂಬಂಧಗಳನ್ನೆಲ್ಲಾ ತಿರಸ್ಕರಿಸಿದ ಅಕ್ಕ ಮತ್ತೊಂದು ಹಂತದಲ್ಲಿ ಲೋಕ ವ್ಯವಸ್ಥೆಯೊಳಗಿನ ಪ್ರತಿಯೊಂದು ವಸ್ತುವನ್ನೂ ಕೂಡ ನಿರಾಕರಿಸುತ್ತಾಳೆ. ಲೌಕಿಕ ಸಂಬಂಧದೊಂದಿಗೆ ಬೆಸೆದುಕೊಂಡ ಕಾಯ, ಮನಸ್ಸು ಅಂಗ-ಲಿಂಗ ಸಂಬಂಧ, ಎಲ್ಲವನ್ನೂ ವಿರೋಧಿಸಿ ತನ್ನದೇ ಆದ ರೀತಿಯಲ್ಲಿ ಅವುಗಳ ಅಸ್ತಿತ್ವವನ್ನು ಗುರುತಿಸಲು ಮುಂದಾಗುತ್ತಾಳೆ. ಅವಳ ವಚನಗಳಲ್ಲಿ ಲೌಕಿಕ ಭೋಗಾಸಕ್ತಿಯಿಂದ ಕೂಡಿದ ಕಾಯದ ಬಗೆಗೆ ತೀವ್ರವಾದ ನಿರಾಸಕ್ತಿ, ಬೇಸರಗಳನ್ನು ಗುರುತಿಸಬಹುದು. ಸಮಕಾಲೀನ ವಚನಕಾರರು ಕಾಯಕ್ಕೆ ಅತ್ಯಂತ ಮಹತ್ವದ ಸ್ಥಾನವನ್ನು ನೀಡಿದ್ದರೆ, ಅಕ್ಕ ಅದೆಲ್ಲವನ್ನೂ ನಿರಕರಿಸುತ್ತಾಳೆ. ಬಸವಣ್ಣ ''ಎನ್ನ ಕಾಲೇ ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಲಶ'' ಎಂದು ದೇಹಕ್ಕೆ ದೇವಾಲಯದ ಸ್ಥಾನವನ್ನು ನೀಡಿದರೆ, ಮೋಳಿಗೆ ಮಹಾದೇವಿ, ''ಕಾಯವೇ ಕೈಲಾಸವೆಂದ ಮೇಲೆ ಬೇರೆ ಕೈಲಾಸವುಂಟೆ'' ಎಂದು ಶಕ್ತಿಗೆ, ಮುಕ್ತಿಗೆ ಸಾಧಕ ಈ ಕಾಯ ಎನ್ನುವುದರ ಮೂಲಕ ದೇಹದ ಮಹತ್ವವನ್ನು ವಿವರಿಸುತ್ತಾಳೆ. ಆದರೆ ಅಕ್ಕ, ''ಅಮೇಧ್ಯದ ಮಡಿಕೆ, ಮೂತ್ರದ ಕುಡಿಕೆ, ಎಲುಬಿನ ತಡಿಕೆ, ಕೀವಿನ ಹಡಿಕೆ - ಸುಡಲೀದೇಹವ'' ಎಂದು ಪ್ರಲೋಭನೆಗಳಿಂದ ಕೂಡಿದ ಹೆಣ್ಣಿನ ದೇಹದ ವಾಸ್ತವ ಸ್ಥಿತಿಯನ್ನು ವಿವರಿಸುವ ಮೂಲಕ ಅದರ ಬಗೆಗಿನ ವ್ಯಾಮೋಹವನ್ನು ಸಂಪೂರ್ಣವಾಗಿ ನಿರಾಕರಿಸುತ್ತಾಳೆ. ದೇಹದ ಬಗೆಗೆ ಲೋಕ ಒಪ್ಪಿತ ನಿರ್ಧಾರಗಳನ್ನು ತಿರಸ್ಕರಿಸುವ ಅಕ್ಕ ಚೆನ್ನಮಲ್ಲಿಕಾರ್ಜುನನ ಸಾನಿಧ್ಯದೊಂದಿಗಿನ ದೇಹದ ಬಗೆಗೆ ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ.

ಅಂಗವ ಲಿಂಗಮುಖದಲ್ಲಿ ಅರ್ಪಿಸಿ
ಅಂಗ ಅನಂಗವಾಯಿತ್ತು.
ಮನವ ಅರಿವಂಗರ್ಪಿಸಿ ಮನಲವಯವಾಯಿತ್ತು.
ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು
ಅಂಗ ಮನ ಭಾವವಳಿದ ಕಾರಣ
ಕಾಯ ಅಕಾಯವಾಯಿತ್ತು.
ಎನ್ನ ಕಾಯದ ಸುಖ ಭೋಗವ ಲಿಂಗವೆ ಭೋಗಿಸುವವನಾಗಿ
ಶರಣಸತಿ ಲಿಂಗ ಪತಿಯಾದನು [೧]

ಎಂದು ಹೇಳುವ ಮೂಲಕ ತನ್ನ ದೇಹದ ಸ್ಥಿತಿಯನ್ನು ವಿವರಿಸುತ್ತಾಳೆ. ಒಂದು ಹಂತದಲ್ಲಿ ಎಲ್ಲವನ್ನೂ ಒಳಗೊಂಡಿರುವ ದೇಹ ಮತ್ತೊಂದು ಹಂತದಲ್ಲಿ ಏನೂ ಇಲ್ಲದಿರುವ ಸ್ಥಿತಿಯನ್ನು ಹೊಂದುತ್ತದೆ. ಲೌಕಿಕದೊಂದಿಗೆ ಅಂಗ, ಮನ, ಭಾವಗಳು ನಿಕಟ ಸಂಬಂಧ ಹೊಂದಿರುವ ಕಾರಣ ಕಾಯ ತನ್ನ ಅಸ್ತಿತ್ವವನ್ನು ಕಳೆದುಕೊಂಡು ಅಕಾಯವಾಗುವ ಸ್ಥಿತಿಯನ್ನು ಹೊಂದಿದೆ. ಈ ಕಾಯದ ಸುಖ ಭೋಗವೆಲ್ಲಾ ಲೌಕಿಕಕ್ಕಿಂತ ಭಿನ್ನ ನೆಲೆಯಲ್ಲಿ ರೂಪುಗೊಂಡಾಗ ಅದನ್ನು ಸ್ವೀಕರಿಸಲು ಸಿದ್ಧಗೊಳ್ಳುವುದರ ಮೂಲಕ ಹೆಣ್ಣಿನ ದೇಹದ ಬಗೆಗಿನ ಸಿದ್ಧ ನಂಬಿಕೆಗಳನ್ನು ನಿರಾಕರಿಸುತ್ತಾಳೆ. ದೇಹವನ್ನು ಮೀರಿದ ಸ್ಥಿತಿ ತನ್ನದಾಗಬೇಕೆನ್ನುವ ಅಕ್ಕ ಅದರ ಮೂಲ ನೆಲೆಯನ್ನು ಕುರಿತು ಹೀಗೆ ಹೇಳುತ್ತಾಳೆ.

ಆದಿಯದೇಹ, ಅನಾದಿಯ ನಿರ್ದೇಹ
ಆದಿಯೆ ಸಕಲ, ಅನಾದಿಯ ನಿಷ್ಕಲ.
ಆದಿಯೆ ಜಡ, ಅನಾದಿಯೆ ಅಜಡ
ಆದಿಯೆ ಕಾಯ, ಅನಾದಿಯೆ ಪ್ರಾಣ, [೨]

ಎಂದು ಆದಿಯನ್ನು ಮೀರಿದ ಅನಾದಿಯ ಸ್ಥಿತಿ ತನ್ನದಾಗಬೇಕೆಂದು ಬಯಸುತ್ತಾಳೆ. ಆದಿಗೆ ಸಾವು, ಕೇಡುಗಳ ಹಂಗಿದೆ. ಆದರೆ ಅನಾದಿಗೆ ಅದ್ಯಾವುದೂ ಇಲ್ಲ. ಚೆನ್ನಮಲ್ಲಿಕಾರ್ಜುನನ ವ್ಯಕ್ತಿತ್ವವನ್ನು ಕಟ್ಟಿಕೊಡುವ ಸಂದರ್ಭದಲ್ಲಿಯೂ ಕೂಡ ಅಕ್ಕ ಅನಾದಿ ಸ್ಥಿತಿಯ ವ್ಯಕ್ತಿಯ ಸ್ವರೂಪವನ್ನು ವಿವರಿಸುತ್ತಾಳೆ. ಆ ರೀತಿ ಇಲ್ಲದ ಕಾಯ ಇದ್ದೂ ನಿಷ್ಪ್ರಯೋಜಕವೆನ್ನುವ ಅಕ್ಕ

ಕಾಯ ಕರ್‍ರನೆ ಕಂದಿದಡೇನಯ್ಯಾ?
ಕಾಯ ಮಿರ್‍ರನೆ ಮಿಂಚಿದಡೇನಯ್ಯಾ?
ಅಂತರಂಗ ಶುದ್ಧವಾದ ಬಳಿಕ
ಚೆನ್ನಮಲ್ಲಿಕಾರ್ಜುನಯ್ಯ
ನೀನೊಲಿದ ಕಾಯವು ಹೇಗಿದ್ದಡೇನಯ್ಯಾ [೩]

---

೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೫

೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೮೮

೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೩೨

ಎಂದು ಕಾಯ ಮತ್ತು ಅಂತರಂಗ ಶುದ್ಧಿಯ ನಡುವಿನ ಸಂಬಂಧವನ್ನು ವಿವರಿಸುತ್ತಾಳೆ. ತನ್ನ ದೇಹದ ಪ್ರತಿಯೊಂದನ್ನೂ ಚೆನ್ನಮಲ್ಲಿಕಾರ್ಜುನನಿಗೆ ಮೀಸಲಿರಿಸಿದ ಅಕ್ಕ ತನ್ನೊಳಗೆ ಚೆನ್ನಮಲ್ಲಿಕಾರ್ಜುನನ ಅಸ್ತಿತ್ವವನ್ನು ಗುರುತಿಸಲು ಪ್ರಯತ್ನಿಸುತ್ತಾಳೆ. ''ಅಣ್ಣಾ ನಾನು ಹೆಂಗೂಸಲ್ಲಾ, ಹೆಣ್ಣು ಸೂಳೆಯಲ್ಲ'' ಎನ್ನುವ ಮಾತು ದೈಹಿಕ ರಚನೆಯ ಕಾರಣವಾಗಿ ಹೆಣ್ಣಿನ ಅಸ್ತಿತ್ವವನ್ನು ಗುರುತಿಸುವ ಲೋಕದ ಮಿತಿಯನ್ನು ವಿರೋಧಿಸುವ ಬಗೆಯದ್ದಾಗಿದೆ.

ಅಂಗ-ಲಿಂಗ ಸಂಬಂಧದ ಬಗ್ಗೆ ಮಾತನಾಡುವ ಅಕ್ಕ ಅಂಗದಲ್ಲಿ ಲಿಂಗವನ್ನು ಲಿಂಗದಲ್ಲಿ ಅಂಗವನ್ನು ಕಾಣಲು ಪ್ರಯತ್ನಿಸುತ್ತಾಳೆ. ''ಅಂಗಸಂಗದಲ್ಲಿ ಲಿಂಗಸಂಗಿಯಾದೆನು, ಲಿಂಗ ಸಂಗದಲ್ಲಿ ಅಂಗಸಂಗಿಯಾದೆನು'' ಎಂದು ಅಂಗ-ಲಿಂಗದ ನಡುವೆ ಅಭೇದವನ್ನು ಗುರುತಿಸುತ್ತಾಳೆ. ''ನಿಮ್ಮ ಒಲುಮೆಯಿಂದ ಸಂಗವಳಿದು ಸ್ವಯಂ ಲಿಂಗವಾದೆನಯ್ಯಾ ಪ್ರಭುವೆ'' ಎಂದು ತಾನೇ ಲಿಂಗವಾದ ಬಗೆಯನ್ನು ವಿವರಿಸುತ್ತಾಳೆ.

ಮನುಷ್ಯನ ಸಹಜ ಗುಣಗಳಾದ ಕಾಮ, ಕ್ರೋಧಾದಿಗಳ ಬಗ್ಗೆ ವಿವೇಚಿಸುವ ಅಕ್ಕ ಆ ಗುಣಗಳು ತನ್ನಲಿಲ್ಲ ಎಂದು ಹಲವು ಸಂದರ್ಭದಲ್ಲಿ ಸಾಬೀತುಪಡಿಸುತ್ತಾಳೆ. ''ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳಿಗೆ ಇಕ್ಕಿದೆನು ಕಾಲಲಿ ತೊಡರನು'' ಎಂದು ಲೌಕಿಕ ಪ್ರಲೋಭನೆಗೆ ಕಾರಣವಾದ ಈ ಗುಣಗಳು ತನ್ನ ಬಳಿ ಸುಳಿಯಲೂ ಕೂಡ ಸಾಧ್ಯವಿಲ್ಲವೆನ್ನುತ್ತಾಳೆ. ಅವಳು ಲೌಕಿಕದ ಎಲ್ಲಾ ಆಸೆ, ಆಕಾಂಕ್ಷೆಗಳಿಂದ ಮುಕ್ತವಾದ ಬಗೆಯನ್ನು ಗಮನಿಸಿದಾಗ ಕಾಮ ಕ್ರೋಧಾದಿಗಳನ್ನು ನಿರಾಕರಿಸಿದ ಬಗೆಯನ್ನು ಗುರುತಿಸ ಬಹುದಾಗಿದೆ.

ಕಾಮಕ್ರೋಧಗಳನ್ನು ಮೀರದೆ ವಿರಕ್ತರೆಂದು ಕರೆಸಿಕೊಳ್ಳುವ ಕಪಟ ವೇಷಧಾರಿಗಳನ್ನು ಕುರಿತಂತೆ ''ವಿರಕ್ತಿ, ವಿರಕ್ತರೆಂದೇನೊ? ವಿರಕ್ತಿಯ ಮಾತನಾಡುವರಲ್ಲದೆ ವಿರಕ್ತಿಕೆ ಎಲ್ಲರಿಗೆಲ್ಲಿಯದೊ?'' ಎಂದು ಕಟುವಾಗಿ ನಿಂದಿಸುತ್ತಾಳೆ. ವಿರಕ್ತನಲ್ಲಿ ಇರಬೇಕಾದ ಗುಣಲಕ್ಷಣಗಳನ್ನೂ ಕೂಡ ತಿಳಿಸುವ ಅಕ್ಕ ''ಕಂಗಳ ನೋಟ ಹಿಂಗದನ್ನಕ, ಕೈಯಾಳಗಣ ಬೆರಟು ನಿಲ್ಲದನ್ನಕ್ಕ, ಹೃದಯದ ಕಾಮ ಉಡುಗುದನ್ನಕ್ಕ, ವಿರಕ್ತಿಕೆ ಎಲ್ಲರಿಗೆಲ್ಲಿಯದೊ'' ಎಂದು ಬಾಹ್ಯಾಡಂಬರದ ವಿರಕ್ತಿಗಿಂತ ಅಂತರಂಗ ಶುದ್ಧವಾದ ವಿರಕ್ತಿಕೆಯ ಮಹತ್ವವನ್ನು ಎತ್ತಿ ಹಿಡಿಯುತ್ತಾಳೆ.

ಲೋಕ ವ್ಯವಸ್ಥೆಯ ಆಧಾರ ಸ್ಥಂಭಗಳಾದ ಕುಲ, ಜಾತಿ, ವರ್ಗ, ವರ್ಣಗಳನ್ನು ಕೂಡ ಅಕ್ಕ ತನ್ನ ವಚನಗಳಲ್ಲಿ ವಿಮರ್ಶೆಗೆ ಒಳಪಡಿಸುತ್ತಾಳೆ. ಅವೆಲ್ಲವನ್ನೂ ಅಹಂಕಾರದ ಸಾಧನವೆನ್ನುವ ಅಕ್ಕ

**ಅಯ್ಯಾ, ಸರ್ವಮೂಲಹಂಕಾರವಿಡಿದು**
**ಕುಲಭ್ರಮೆ ಛಲಭ್ರಮೆ ಜಾತಿಭ್ರಮೆ,**
**ನಾಮವರ್ಣ ಆಶ್ರಮ ಮತ ಶಾಸ್ತ್ರಭ್ರಮೆ,**
**ತರ್ಕಭ್ರಮೆ ರಾಜ್ಯಭ್ರಮೆ, ಧನ ಧಾನ್ಯ ಪುತ್ರ ಮಿತ್ರಭ್ರಮೆ**
**ಐಶ್ವರ್ಯ ತ್ಯಾಗ ಭೋಗ ಯೋಗಭ್ರಮೆ**
**ಕಾಯ ಕರಣ ವಿಷಯಭ್ರಮೆ**
**ವಾಯು ಮನ ಭಾವ ಜೀವ ಮೋಹ ಭ್ರಮೆ [೪]**

ಎಂದು ಲೌಕಿಕದ ಎಲ್ಲಾ ವಸ್ತು ವಿಷಯಗಳೂ ಕೂಡ ಭ್ರಮೆಗೆ ಕಾರಣವಾದವುಗಳು ಎನ್ನುವ ಮೂಲಕ ಆದರ್ಶ

---

೪. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೧

ಎಂದು ಕರೆಯಲ್ಪಡುವ ಪರಿಕಲ್ಪನೆಗಳನ್ನೆಲ್ಲಾ ನಿರಾಕರಿಸುತ್ತಾಳೆ. ವೇದ, ಶಾಸ್ತ್ರ ಆಗಮಾದಿಗಳನ್ನು ವಿಮರ್ಶೆಗೆ ಒಳಪಡಿಸುವ ಅಕ್ಕ ಅವುಗಳ ಇರುವಿಕೆಯನ್ನೂ ಕೂಡ ಅಲ್ಲಗಳೆಯುತ್ತಾಳೆ

ಓದಿ ಓದಿ ವೇದ ವಾದಕ್ಕಿಕ್ಕಿತ್ತು.
ಕೇಳಿ ಕೇಳಿ ಶಾಸ್ತ್ರ ಸಂದೇಹಕ್ಕಿಕ್ಕಿತ್ತು.
ಅರಿದೆಹೆ ಅರಿದೆಹೆನೆಂದು ಆಗಮ ಅರೆಯಾಗಿ ಹೋಯಿತ್ತು.
ಪೂರೈಸಿಹೆ ಪೂರೈಸಿಹೆನೆಂದು
ಪುರಾಣ ಪೂರ್ವದ ಬಟ್ಟೆಗೆ ಹೋಯಿತ್ತು.
ನಾನೆತ್ತ ತಾನೆತ್ತ?
ಬೊಮ್ಮ ಬಟ್ಟ ಬಯಲು ಚೆನ್ನಮಲ್ಲಿಕಾರ್ಜುನ. [೫]

ವೇದ, ಶಾಸ್ತ್ರ ಆಗಮ ಪುರಾಣಗಳ ಜೊತೆಗೆ ಓದುವ, ಕೇಳುವ ಅರಿಯುವ ಸಂಸ್ಕೃತಿಯನ್ನು ಕೂಡ ಅಕ್ಕ ಕಟುವಾಗಿ ಟೀಕಿಸುತ್ತಾಳೆ. ಇವುಗಳಿಗೆ ನೀಡಿದ ಹೆಚ್ಚಿನ ಪ್ರಾಮುಖ್ಯತೆಯೇ ಅವು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳಲು ಕಾರಣವೆನ್ನುತ್ತಾಳೆ.

ಅಕ್ಕ ಒಟ್ಟಾರೆ ಸಮಾಜ ಸಂಸ್ಕೃತಿಯ, ಲೋಕರೂಢಿಯ ಎಲ್ಲಾ ವಸ್ತು ವಿಷಯಗಳನ್ನು ತಿರಸ್ಕರಿಸುತ್ತಾಳೆ. ಲೋಕದ ಬಗೆಗೆ ಕಟ್ಟಿಕೊಂಡ ಸಿದ್ಧ ನಂಬಿಕೆಗಳು ಮತ್ತು ಸಿದ್ಧ ಮೌಲ್ಯಗಳನ್ನು ಸಂಪೂರ್ಣ ನಿರಾಕರಿಸಿ ಅದಕ್ಕೆ ತನ್ನದೇ ಆದ ಹೊಸ ವ್ಯಾಖ್ಯಾನವನ್ನು ಕಟ್ಟಿ ಕೊಡಲು ಪ್ರಯತ್ನಿಸುತ್ತಾಳೆ. ಅವಳ ಈ ವಿಧಾನ ಲೋಕ ಒಪ್ಪಿತ ಮೌಲ್ಯಗಳ ವಿರುದ್ಧ ಆರಂಭಿಸಿದ ತೀವ್ರ ಪ್ರತಿಭಟನೆಯ ಸ್ವರೂಪವನ್ನು ತಿಳಿಸುತ್ತದೆ. ಜೊತೆಗೆ ಸಿದ್ಧ ಮಾದರಿಗಳನ್ನು ಮುರಿದು ಕಟ್ಟುವ ಪ್ರಕ್ರಿಯೆಯನ್ನು ಎತ್ತಿ ಹಿಡಿಯುತ್ತದೆ.

---

೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೦೭

# ಈ. ನಿರಾಕರಣ ಪ್ರಕ್ರಿಯೆಯಲ್ಲಿ ರೂಪಕಗಳ ಬಳಕೆ

- ನಿಸರ್ಗದಲ್ಲಿ ಜೀವಂತಿಕೆಯ ಹುಡುಕಾಟ.
- ಜೀವನಾನುಭವ ಮತ್ತು ಸಮಾಜ ವಿಮರ್ಶೆಗೆ ರೂಪಕಗಳ ಬಳಕೆ.
- ಗಂಡನ ಕಲ್ಪನೆ ಮತ್ತು ರೂಪಕಗಳಲ್ಲಿ ಚೆನ್ನಮಲ್ಲಿಕಾರ್ಜುನ
- ಜೀವಂತಿಕೆ ಮತ್ತು ಹೋರಾಟದ ರೂಪಕವಾಗಿ ಅಕ್ಕನ ಜೀವನ ಹಾಗೂ ಸಾಧನೆ.

ಅಕ್ಕನ ವಚನಗಳನ್ನು ಅಧ್ಯಯನ ಮಾಡಿದಾಗ ಅವಳ ವಚನಗಳ ವಿಶೇಷತೆ ಹಿರಿದೆನಿಸುತ್ತಿವೆ. ಇವು ಕೇವಲ ಭಕ್ತಿಪ್ರಧಾನವಾಗಿರದೆ ಸಾಹಿತ್ಯಿಕ ಅಂಶಗಳೂ ಪ್ರಮುಖ ಸ್ಥಾನ ಪಡೆದುಕೊಂಡಿವೆ. ''ಅಜಗಣ್ಣನ ಐದು ವಚನಕ್ಕೆ ಮಹಾದೇವಿ ಯಕ್ಕಗಳ ಒಂದು ವಚನ ನಿರ್ವಚನ'' ಎನ್ನುವ ಚೆನ್ನಬಸವಣ್ಣನ ಮಾತು ಅವಳ ವಚನಗಳ ವಿಶೇಷತೆಯನ್ನು ಎತ್ತಿ ಹಿಡಿಯುತ್ತದೆ. ಭಾವಗೀತಾತ್ಮಕ ಲಯ, ಆಧುನಿಕ ಪ್ರೇಮಗೀತೆಯ ಮಾದರಿಯನ್ನೊಳಗೊಂಡಿರುವ ಈ ವಚನಗಳು ವಸ್ತುಸ್ಥಿತಿಯನ್ನು ವಿವರಿಸುವಲ್ಲಿ ತನ್ನದೇ ಆದ ವಿಶೇಷತೆಯಿಂದ ಕೂಡಿವೆ. ಅಕ್ಕ ಬಳಸುವ ಉಪಮೆ, ರೂಪಕ, ಪ್ರತಿಮೆಗಳು ಅವಳ ಮನದಾಳದ ಇಂಗಿತವನ್ನು ಸಮರ್ಪಕವಾಗಿ ಪ್ರತಿನಿಧಿಸುತ್ತಿವೆ. ಅಕ್ಕನ ವಚನಗಳಲ್ಲಿ ಕಂಡುಬರುವ ನಿರಾಕರಣ ಪ್ರಕ್ರಿಯೆಯಲ್ಲಿ ರೂಪಕಗಳ ಬಳಕೆ ಯಾವ ಸ್ವರೂಪದ್ದು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಕ್ಕ ಸಮಾಜ, ಸಂಸ್ಕೃತಿ ಹಾಗೂ ಸಂಪ್ರದಾಯದ ವಿರುದ್ಧ ತನ್ನ ಅಭಿಪ್ರಾಯವನ್ನು ವಚನ ಮಾಧ್ಯಮದ ಮೂಲಕ ಸಮರ್ಪಕವಾಗಿ ಹಿಡಿದಿಟ್ಟಿದ್ದಾಳೆ. ಸಾಮಾನ್ಯವಾಗಿ ಪ್ರಕೃತಿಯ ರೂಪಕಗಳನ್ನು ಬಳಸುವುದರ ಮೂಲಕ ಜೀವನದ ಆಗು ಹೋಗುಗಳನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾಳೆ. ಒಂದು ಹಂತದಲ್ಲಿ ಅಕ್ಕಮಹಾದೇವಿ, ಚೆನ್ನಮಲ್ಲಿಕಾರ್ಜುನ. ಈ ಪಾತ್ರಗಳು ತಮ್ಮ ವೈಯಕ್ತಿಕತೆಯನ್ನು ಮೀರಿ ರೂಪಕಗಳಾಗಿ ನಿಲ್ಲುತ್ತವೆ. ಅಕ್ಕ ಸ್ತ್ರೀ ಸ್ವಾತಂತ್ರ್ಯದ, ಸಬಲತೆಯ ರೂಪಕವಾದರೆ, ಚೆನ್ನಮಲ್ಲಿಕಾರ್ಜುನ ಆದರ್ಶ ಗಂಡನ, ಪ್ರಬುದ್ಧತೆಯ ರೂಪಕವಾಗುತ್ತಾನೆ. ಇಡೀ ಬದುಕನ್ನೇ ಹೋರಾಟದ ಪ್ರತಿರೂಪಕವಾಗಿಸಿಕೊಂಡ ಅಕ್ಕನ ವಚನಗಳಲ್ಲಿ ಇದರ ಸ್ವರೂಪವನ್ನು ಸಮರ್ಪಕವಾಗಿ ತಿಳಿಯಬಹುದು.

## ನಿಸರ್ಗದಲ್ಲಿ ಜೀವಂತಿಕೆಯ ಹುಡುಕಾಟ

ಅಕ್ಕ ತನ್ನ ವಚನಗಳಲ್ಲಿ ಪ್ರಕೃತಿಯ ರೂಪಕಗಳನ್ನು ಜೀವನದಲ್ಲಿ ಎದುರಿಸಬೇಕಾದ ಹಲವಾರು ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುವ ಪ್ರಮುಖ ಸಾಧನವನ್ನಾಗಿ ಬಳಸಿದ್ದಾಳೆ.

ಅವಳಿಗೆ ಚೆನ್ನಮಲ್ಲಿಕಾರ್ಜುನನನ್ನು ಕಾಣಲು ಸಹಾಯಕವಾಗುವ ಏಕೈಕ ಸಾಧನ ನಿಸರ್ಗ. ಅಲ್ಲದೆ ಚೆನ್ನಮಲ್ಲಿಕಾರ್ಜುನನಿಗೂ ನಿಸರ್ಗಕ್ಕೂ ಅವಿನಾಭಾವ ನಂಟು. ತನ್ನ ಜೀವನದ ನೋವು, ನಲಿವು, ವಿರಸ, ಆಕರ್ಷಣೆ, ವಿಕರ್ಷಣೆ ಈ ರೀತಿಯ ವಿವಿಧ ಅನುಭವಗಳನ್ನು ಪ್ರಕೃತಿ ರೂಪಕಗಳ ಮೂಲಕ ತಿಳಿಸಿದ್ದಾಳೆ. ತನ್ನೆಲ್ಲಾ ಸಮಸ್ಯೆಗಳಿಗೂ ಪ್ರಕೃತಿಯ ಮೂಲಕ ಪರಿಹಾರ ಹುಡುಕುವ ಮಾರ್ಗ ಅಕ್ಕನದು.

ಅಕ್ಕ ನಿಸರ್ಗವನ್ನು ತನ್ನ ಸಾಹಿತ್ಯ ಕೃಷಿಯ ಮುಖ್ಯ ಆಕರವೆಂದು ಮಾತ್ರ ಭಾವಿಸದೆ ವಚನದ ರಚನೆಗೆ ಸ್ಫೂರ್ತಿ ನೀಡುವ ಪ್ರಮುಖ ಅಂಶಗಳಲ್ಲೊಂದನ್ನಾಗಿಸಿಕೊಂಡವಳು. ಅಕ್ಕ ನಿಸರ್ಗ ಹಾಗೂ ಚೆನ್ನಮಲ್ಲಿಕಾರ್ಜುನ ಈ ಮೂರೂ ಕೂಡ ಬೇರೆ ಬೇರೆ ಅಲ್ಲ, ಒಂದರೊಳಗೊಂದು ಲೀನವಾಗಿರುವುದನ್ನು ಅವಳ ವಚನಗಳ ಅಧ್ಯಯನದಿಂದ ತಿಳಿಯಬಹುದು. ಪ್ರಕೃತಿಯ ಒಂದು ಭಾಗವಾದ ಕದಳಿವನ ಅಕ್ಕನಿಗೆ ತನು, ಮನ, ವಿಷಯಗಳು ಮಾತ್ರವಲ್ಲದೆ ಚೆನ್ನಮಲ್ಲಿಕಾರ್ಜುನನ್ನು ತನ್ನೊಳಗೆ ಅಡಗಿಸಿಕೊಂಡಿರುವ ನೆಲೆಯೂ ಆಗಿವೆ.

**ಕದಳಿ ಎಂಬುದು ತನು, ಕದಳಿ ಎಂಬುದು ಮನ**
**ಕದಳಿ ಎಂಬುದು ವಿಷಯಂಗಳು**
**ಕದಳಿ ಎಂಬುದು ಭವ ಘೋರಾರಣ್ಯ**
**ಕದಳಿ ಎಂಬುದ ಗೆದ್ದು ತವೆ ಬದುಕಿಬಂದು**
**ಕದಳಿಯ ಬನದಲ್ಲಿ ಭವಹರನ ಕಂಡೆನು** ೧

ಇಲ್ಲಿ ಕವಳಿವನ ಇಡೀ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ತನ್ನೊಡೆಯ ಚೆನ್ನಮಲ್ಲಿಕಾರ್ಜುನನನ್ನು ಕಾಣಬೇಕಾದರೆ ಪ್ರಕೃತಿಯ ಇರುವಿಕೆಯನ್ನು ಸಮರ್ಪಕವಾದ ರೀತಿಯಲ್ಲಿ ಅರಿತಾಗ ಮಾತ್ರ ಪ್ರಕೃತಿಯಲ್ಲಿ ಬೆರೆಯುವುದು ಸಾಧ್ಯ ಎನ್ನುತ್ತಾಳೆ.

**ಬೆಟ್ಟಕ್ಕೆ ಸಾರವಿಲ್ಲೆಂಬರು**
**ತರುಗಳು ಹುಟ್ಟುವ ಪರಿ ಇನ್ನೆಂತಯ್ಯಾ?**
**ಇದ್ದಲಿಗೆ ರಸವಿಲ್ಲೆಂಬರು ;**
**ಕಬ್ಬುನ ಕರಗುವ ಪರಿ ಇನ್ನೆಂತಯ್ಯಾ?**
**ಎನಗೆ ಕಾಯವಿಲ್ಲೆಂಬರು**
**ಚೆನ್ನಮಲ್ಲಿಕಾರ್ಜುನನೊಲಿಸುವ ಪರಿ ಇನ್ನೆಂತಯ್ಯಾ?** ೨

ಎಂದು ಪ್ರಕೃತಿಯ ಪ್ರತಿ ವಸ್ತುವಿಗೂ ಸಹ ಅದರದ್ದೇ ಆದ ರೀತಿಯ ಜೀವಂತಿಕೆ ಇದೆ. ಕಲ್ಲಿನಲ್ಲಿ ಸಾರವಿಲ್ಲ ಇದ್ದಲಿನಲ್ಲಿ ರಸವಿಲ್ಲವೆಂಬ ಲೋಕಸಿದ್ಧ ನಂಬಿಕೆಗಳನ್ನು ಅಲ್ಲಗಳೆದು ಬೆಟ್ಟಗುಡ್ಡಗಳಲ್ಲಿ ಗಿಡಮರಗಳು ಹುಟ್ಟುವುದನ್ನು ಇದ್ದಲಿನಿಂದ ಕಬ್ಬಿಣ ಕರುಗುವುದನ್ನು ವಿವರಿಸುವುದರ ಮೂಲಕ ಅದರ ಜೀವಂತಿಕೆಯನ್ನು ತಿಳಿಸುತ್ತಾಳೆ. ಕಾಯವಿಲ್ಲದೆ ಆಧ್ಯಾತ್ಮ ಅನುಭವವನ್ನು ಪಡೆಯಲು ಸಾಧ್ಯವಿಲ್ಲವೆನ್ನುವ ಅಕ್ಕ ಲೌಕಿಕ ಭೋಗಾಸಕ್ತಿಯಿಂದ ಕೂಡಿದ ಕಾಯವನ್ನು

೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೧೫
೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೫೨

ನಿರಾಕರಿಸಿ ಸಕಲ ಗುಣಗಳನ್ನು ತನ್ನೊಳಗೆ ಒಳಗೊಂಡಿರುವ ಕಾಯದ ಸ್ವೀಕೃತಿಯನ್ನು ತಿಳಿಸಿದ್ದಾಳೆ.

ಹಿಂದಿನಿಂದಲೂ ಪ್ರಕೃತಿಗೆ ದೈವತ್ವದ ಸ್ಥಾನವನು ನೀಡಿದ್ದಾರಾದರೂ ದೇವರನ್ನು ಕಾಣಲು ಪ್ರಯತ್ನಿಸಿದ್ದು ದೇವಾಲಯದಲ್ಲಿ. ಆದರೆ ಅಕ್ಕ ಚೆನ್ನಮಲ್ಲಿಕಾರ್ಜುನನ್ನು ಪ್ರಕೃತಿಯ ಪ್ರತಿ ವಸ್ತುವಿನಲ್ಲಿಯೂ ಕಾಣಲು ಪ್ರಯತ್ನಿಸುತ್ತಾಳೆ.

**ವನವೆಲ್ಲಾ ನೀನೆ, ಮನದೊಳಗಣ ದೇವ ತರುವೆಲ್ಲಾ ನೀನೆ,**
**ತರುವಿನೊಳಗಾಡುವ ಖಗಮೃಗವೆಲ್ಲ ನೀನೆ.**
**ಚೆನ್ನಮಲ್ಲಿಕಾರ್ಜುನಾ,**
**ಸರ್ವಭರಿತನಾಗಿ ಎನಗೇಕೆ ಮುಖದೋರೆ?**[೩]

ಎಂದು ಎಲ್ಲದರಲ್ಲಿಯೂ ತನ್ನ ಇರುವಿಕೆಯನ್ನು ಸಂಸ್ಥಾಪಿಸಿರುವ ಚೆನ್ನಮಲ್ಲಿಕಾರ್ಜುನನನ್ನು ಪ್ರಕೃತಿಯಲ್ಲಿ ಕಾಣುವ, ಒಂದಾಗುವ ಬಯಕೆ ಅವಳದು. ಇನ್ನು ಅಕ್ಕ ತನ್ನ ಗಂಡನಾದ ಚೆನ್ನಮಲ್ಲಿಕಾರ್ಜುನನ್ನು ಹುಡುಕಿಕೊಡಲು ಮೊರೆ ಹೋಗುವುದು ಕೂಡ ಪ್ರಕೃತಿಯ ಮಡಿಲಲ್ಲಿಯೇ, ಮಗಳಿಗೆ ತಕ್ಕ ವರನನ್ನು ಹುಡುಕುವುದು ತಂದೆ - ತಾಯಿಗಳ ಕೆಲಸವಾದರೂ ಅಕ್ಕ ಆ ಕರ್ತವ್ಯವನ್ನು ಗಿಡ, ಮರ, ಪ್ರಾಣಿ, ಪಕ್ಷಿಗಳಿಗೆ ವಹಿಸುತ್ತಾಳೆ.

**ಅಳಿಸಂಕುಲವೆ, ಮಾಮರವೆ, ಬೆಳದಿಂಗಳೆ, ಕೋಗಿಲೆಯೆ**
**ನಿಮ್ಮನೆಲ್ಲರನೂ ಒಂದ ಬೇಡುವೆನು**
**ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡೆಡೆ**
**ಕರೆದು ತೋರಿರೆ**[೪]



ಹೀಗೆ ತನ್ನ ಎಲ್ಲಾ ಕಾರ್ಯ ಸಾಧನೆಗೆ ಅಕ್ಕ ಮೊದಲು ಮೊರೆ ಹೋಗುವುದು ಪರಿಸರ ಮತ್ತು ಅದರಲ್ಲಿ ಆಶ್ರಯ ಪಡೆದಿರುವ ಪ್ರಾಣಿ ಸಂಕುಲಕ್ಕೆ. ಈ ರೀತಿ ನಿಸರ್ಗಕ್ಕೆ ಹೆಚ್ಚಿನ ಮಹತ್ವವನ್ನು ಕೊಡುವುದರ ಮೂಲಕ ಅದರ ಒಂದು ಭಾಗವಾಗಿರುವ ಮನುಷ್ಯನ ಅಸ್ತಿತ್ವ ಹಾಗೂ ಅಹಂಮ್ಮಿಕೆಯನ್ನು ಪ್ರಶ್ನಿಸುತ್ತಾಳೆ.

## ಜೀವನಾನುಭವ ಮತ್ತು ಸಮಾಜ ವಿಮರ್ಶೆಗೆ ರೂಪಕಗಳ ಬಳಕೆ

ಅಕ್ಕ ತನ್ನ ಜೀವನಾನುಭವ ವಿಶ್ಲೇಷಣೆ ಮತ್ತು ಸಮಾಜದ ವಿಮರ್ಶೆಗೆ ಕೂಡ ಈ ಪ್ರಕೃತಿಯ ರೂಪಕಗಳನ್ನು ಬಳಸುತ್ತಾಳೆ. ಅಲೌಕಿಕಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರೂ ಸಹ ಅವಳ ಚಿಂತನೆ, ಆಲೋಚನೆಗಳೆಲ್ಲಾ ಸಮಾಜಮುಖಿಯಾದದ್ದೇ. ಸಮಾಜದೊಂದಿಗೆ ನಿಕಟ ಸಂಪರ್ಕವನ್ನಿರಿಸಿಕೊಂಡಿದ್ದೇ ಆಗಿದೆ. ಅಕ್ಕ ಅಲೌಕಿಕಕ್ಕೆ ಹೆಚ್ಚು ಮಹತ್ವ ನೀಡಿದರೂ ಕೂಡ ಲೌಕಿಕವನ್ನು ಸಂಪೂರ್ಣ ತಿರಸ್ಕರಿಸಿದವಳಲ್ಲ, ಸಮಾಜದ ರೀತಿ, ನೀತಿ, ಕಟ್ಟುಪಾಡು, ಜೀವನ ವಿಧಾನಗಳ ಅರಿವು ಅಕ್ಕನಿಗೆ ಸಮರ್ಪಕವಾಗಿದ್ದುದ್ದರ ಕಾರಣ ಸಮಾಜದಲ್ಲಿ ಹೇಗೆ ಬದುಕಬೇಕೆಂಬುದನ್ನು ಹಾವಿನ ರೂಪಕದ ಮೂಲಕ ಹೇಳುತ್ತಾಳೆ.

---

೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೦೦

೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೪೩

ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೆ ಲೇಸುಕಂಡಯ್ಯಾ,
ಕಾಯದ ಸಂಗವ ವಿವರಿಸಬಲ್ಲಡೆ
ಕಾಯದ ಸಂಗವೆ ಲೇಸು ಕಂಡಯ್ಯಾ.
ತಾಯಿ ರಕ್ಕಸಿಯಾದಂತೆ ಕಾಯವಿಕಾರವು
ಚೆನ್ನಮಲ್ಲಿಕಾರ್ಜುನಯ್ಯಾ
ನೀನೊಲಿದವರು ಕಾಯಗೊಂಡಿದ್ದರೆನಬೇಡ. [೫]

ಈ ರೀತಿ ಹಾವನ್ನು ನಮ್ಮಿಚ್ಚೆಯ ರೀತಿ ಬದಲಿಸಬಲ್ಲೆವಾದಡೆ ಅದರ ಸಹವಾಸವೇ ಲೇಸು. ಕಾಯದ ಸಂಗವೂ ಕೂಡ ಅದೇ ರೀತಿಯದ್ದೇ ಎನ್ನುವ ಅಕ್ಕ ತಾಯಿ ಮತ್ತು ಕಾಯದ ನಡುವಿನ ಸಂಬಂಧವನ್ನು ವಿವರಿಸುತ್ತಾಳೆ. ಈ ಹಾವಿನ ರೂಪಕದ ಮೂಲಕ ಸಮಾಜದ ರೂಪುರೇಖೆಗಳ ವಿಮರ್ಶೆಗೆ ಮುಂದಾಗುತ್ತಾಳೆ. ಲೌಕಿಕ ಭೋಗಾಸಕ್ತಿ ಹಾಗೂ ವಿಷಮಸ್ಥಿತಿಯಿಂದ ಕೂಡಿರುವ ಇಂತಹ ಸಮಾಜದಲ್ಲಿ ನಿಂದೆ, ಕುಹಕ, ಅಪಹಾಸ್ಯ, ಕಿಡಿ ನುಡಿಗಳು ಸಾಮಾನ್ಯವಾದದ್ದು. ಅದರಲ್ಲೂ ಸಂಸಾರವನ್ನು ತ್ಯಜಿಸಿ ದಿಗಂಬರೆಯಾಗಿ ಹೊರಟ ಅಕ್ಕ ಎದುರಿಸಿದ ಸಮಸ್ಯೆಗಳು, ನಿಂದನೆಗಳು ಅಪಾರ. ಇಂತಹ ವಿಷಯ ಸ್ಥಿತಿಯಲ್ಲಿ ಬದುಕಲು ದೃಢ ವಿಶ್ವಾಸ, ಧೈರ್ಯ, ಸಾಮಾಜಿಕ ಪ್ರಜ್ಞೆ ಅತ್ಯಂತ ಅವಶ್ಯಕ. ಈ ಎಲ್ಲಾ ಗುಣಗಳೂ ಅಕ್ಕನಲ್ಲಿ ಇದ್ದುದ್ದವಾದ್ದರಿಂದ ಅವಳು ಸಮಾಜ ನಿಂದನೆಗೆ ಹೆದರದೆ ಬದುಕುವ ವಿಧಾನವನ್ನು ವಿವರಿಸುತ್ತಾಳೆ.

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದಡೆಂತಯ್ಯಾ?
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆತೆರೆಗಳಿಗಂಜಿದಡೆಂತಯ್ಯಾ?
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯಾ?
ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ?
ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದಡೆ
ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು. [೬]

ಈ ವಚನದ ಮೂಲಕ ಸಮಾಜದಲ್ಲಿ ಹೇಗೆ ಬದುಕಬೇಕು ಎಂಬುದನ್ನು ತಿಳಿಸುವುದರ ಜೊತೆಗೆ ಸಾಮಾಜಿಕ ಪ್ರತಿರೋಧಕ್ಕೆ ಉತ್ತರ ನೀಡಿದ್ದಾಳೆ. ಸಮಾಜದಲ್ಲಿ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಯಾವ ರೀತಿ ಬಾಳುವುದು ಮುಖ್ಯ ಎಂದು ತಿಳಿಸುವುದರ ಮೂಲಕ ತನ್ನ ಸ್ಥಿರತೆ, ಧೈರ್ಯ, ದೃಢ ನಿರ್ಧಾರ ಯಾವ ಸ್ವರೂಪದ್ದು ಎಂಬುದನ್ನು ವಿವರಿಸಿದ್ದಾಳೆ.

೫. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೮೦
೬. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೫೩

ಚಂದನವ ಕಡಿದು ಕೊರೆದು ತೇದಡೆ
ನೊಂದೆನೆಂದು ಕಂಪ ಬಿಟ್ಟಿತ್ತೆ?
ತಂದು ಸುವರ್ಣವ ಕಡಿದೊರೆದಡೆ
ಬೆಂದು ಕಳಂಕ ಹಿಡಿಯಿತ್ತೆ?
ಸಂದು ಸಂದ ಕಡಿದ ಕಬ್ಬನು ತಂದು ಗಾಣದಲ್ಲಿಕ್ಕಿ ಅರೆದಡೆ
ಬೆಂದು ಪಾಕಗೂಳ ಸಕ್ಕರೆಯಾಗಿ ನೊಂದೆನೆಂದು ಸಿಹಿಯಬಿಟ್ಟಿತ್ತೆ ? [೭]

ಎಂದು ಸಮಾಜ ತನ್ನನ್ನು ಯಾವ ಪರಿಯಲ್ಲಿ ಪರೀಕ್ಷಿಸಿದರೂ, ನಿಂದಿಸಿದರೂ ತಾನು ಅದಕ್ಕೆ ಹೆದರುವವಳಲ್ಲ. ಬದಲಾಗಿ ಮತ್ತಷ್ಟು ಪಕ್ವವಾಗಿ ತನ್ನಿನಿಯನನ್ನು ಕಂಡುಕೊಳ್ಳುವ ಸುಲಭ ಮಾರ್ಗವನ್ನು ಹುಡುಕುತ್ತೇನೆ ಎನ್ನುವ ಅಕ್ಕ ಚಂದನ, ಸುವರ್ಣ, ಕಬ್ಬುಗಳ ರೂಪಕದ ಮೂಲಕ ಸಮಾಜ ವಿಮರ್ಶೆಯ ವಿಧಾನವನ್ನು ನಿರಾಕರಿಸುತ್ತಾಳೆ.

ಸಮಾಜದ ವಸ್ತು ಸ್ಥಿತಿಯನ್ನು ವಿಮರ್ಶಿಸುವ ಅಕ್ಕ ಅದರ ಇರುವಿಕೆ ಮತ್ತು ಸಾರ್ಥಕತೆಯನ್ನು ಕುರಿತು ಪರಿಸರದ ರೂಪಕದ ಮೂಲಕ ಪ್ರಶ್ನಿಸುತ್ತಾಳೆ.

ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ
ರೂಪಿದ್ದು ಫಲವೇನ ಗುಣವಿಲ್ಲದನ್ನಕ್ಕ
ಅಗಲಿದ್ದು ಫಲವೇನು ಬಾನವಿಲ್ಲದನ್ನಕ್ಕ
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ
ಚೆನ್ನಮಲ್ಲಿಕಾರ್ಜುನಾ ? [೮]

ಎಂದು ಅದರ ಇರುವಿಕೆಯನ್ನು ವಿವರಿಸುವುದರ ಜೊತೆ ಜೊತೆಯಲ್ಲಿಯೇ ನಿರರ್ಥಕತೆಯ ಸ್ವರೂಪವನ್ನು ತಿಳಿಸಿದ್ದಾಳೆ. ನಿರರ್ಥಕವಾದದ್ದು ಸಾರ್ಥಕವಾಗಬಹುದಾದ ಮಾರ್ಗವನ್ನು ಪ್ರಶ್ನಿಸುವುದರ ಮೂಲಕ ಉತ್ತರವನ್ನು ನೀಡಿದ್ದಾಳೆ. ಮರಕ್ಕೆ ನೆರಳು, ಧನಕ್ಕೆ ದಯೆ, ಹಸುವಿಗೆ ಹಯನು, ರೂಪಿಗೆ ಗುಣ, ಅಗಲಿಗೆ ಬಾನ ಇರಬೇಕೆಂಬುದನ್ನು ಹೇಳುವುದರ ಮೂಲಕ ಅದು ಆ ರೀತಿಯಲ್ಲಿಲ್ಲದಿದ್ದಲ್ಲಿ ಅದರ ಉಪಸ್ಥಿತಿ ನಿಸ್ಸಾರವಾದದ್ದು ಎಂಬುದನ್ನು ತಿಳಿಸಿದ್ದಾಳೆ.

ತನ್ನ ಮನಸ್ಸಿನ ದ್ವಂದ್ವ - ವಿಷಮ ಸ್ಥಿತಿ, ಸಂಸಾರದ ಬಂಧನದ ಸ್ವರೂಪವನ್ನು ತಿಳಿಸಲೂ ಕೂಡ ಪ್ರಕೃತಿಯ ರೂಪಕಗಳನ್ನು ಬಳಸಿದ್ದಾಳೆ.

---

೭. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೬೯

೮. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೭೧

ಅತ್ತೆ ಮಾಯೆ, ಮಾವ ಸಂಸಾರಿ
ಮೂವರು ಮೈದುನರು ಹುಲಿಯಂತವದಿರು
ನಾಲ್ವರು ನಗೆವೆಣ್ಣು ಕೇಳು ಕೆಳದಿ...
..................................[೯]

ಎನ್ನುವ ಅಕ್ಕ ಈ ಮಾಯಾ ಸಂಸಾರದಿಂದ ಶೀಘ್ರವಾಗಿ ಬಿಡುಗಡೆ ಪಡೆಯಲು ಪ್ರಯತ್ನಿಸುತ್ತಾಳೆ. ಅಲ್ಲದೆ ಸಂಸಾರದ ಈ ಸಂಬಂಧಗಳ ಸ್ವರೂಪವನ್ನು ಕೂಡ ರೂಪಕಗಳ ಮೂಲಕ ನಿರಾರಕರಿಸುತ್ತಾಳೆ. ''ಪಚ್ಚೆಯದ ನೆಲೆಗಟ್ಟು ಕನಕದ ತೋರಣ, ವಜ್ರದ ಕಂಬ, ಪವಳದ ಚಪ್ಪರದಿಂದ ಕೂಡಿದ ಮದುವೆ ಮನೆ'', ''ಕಾಲಿಲ್ಲದ ಹೆಂಡತಿಗೆ, ತಲೆಯಿಲ್ಲದ ಗಂಡ'' ಬಂದು ಮದುವೆಯಾಗುವ ರೀತಿಯನ್ನು ವಿವರಿಸುವ ಅಕ್ಕ ಸಂಪ್ರದಾಯಿಕ ವಿವಾಹ ವಿಧಾನವನ್ನು ವಿರೋಧಿಸುತ್ತಾಳೆ. ಜೊತೆಗೆ ತನ್ನದೇ ಆದ ರೀತಿಯಲ್ಲಿ ವಿವಾಹ ವ್ಯವಸ್ಥೆಗೆ ಹೊಸ ವ್ಯಾಖ್ಯಾನವನ್ನು ನೀಡುತ್ತಾಳೆ.

ಮತ್ತೊಂದು ಹಂತದಲ್ಲಿ ಅಕ್ಕ ಪ್ರಕೃತಿಯ ಎಲ್ಲಾ ರೀತಿನೀತಿಗಳನ್ನು ಮೀರುವ, ದೈಹಿಕ ಭೋಗಸಾಕ್ತಿಯನ್ನು ವಿರೋಧಿಸುವ ಅಂಶಗಳನು ಗುರುತಿಸಬಹುದು. ''ಒಮ್ಮೆ ಕಾಮನ ಕಾಲ ಹಿಡಿವೆ, ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ, ಸುಡಲೀ ವಿರಹವ'' ಎನ್ನುವ ಅಕ್ಕ ''ಚೆನ್ನಮಲ್ಲಿಕಾರ್ಜುನನ ಕಾಯನ ಕೊಂದು ಮನಸಿಜನಾಗಳುಹಿದರೆ ಮನಸಿಜನ ತಲೆ ಬರಹದ ತೊಡೆದೆನು'', ''ಕಾಮನ ತಲೆಯ ಕೊರೆದು, ಕಾಲನ ಕಣ್ಣ ಕಳೆದು, ಸೋಮ ಸೂರ್ಯರ ಹುರಿದು ಹುಡಿಮಾಡಿ ತಿಂಬವಳಿಂಗೆ ನಾಮದ ನೀಡಬಲ್ಲವರಾರು ಹೇಳಿರೆ'' ಎಂದು ನಿಸರ್ಗ ಸಹಜವಾದ ಕಾಮಾಸಕ್ತಿ ತನಗಿಲ್ಲ ಎಂದು ತಿಳಿಸುತ್ತಾಳೆ.

ನಿಸರ್ಗ ಸಹಜವಾದ ಮತ್ತೊಂದು ನಿಯಮ ಹುಟ್ಟು - ಸಾವುಗಳನ್ನು ಕುರಿತು ಅಕ್ಕ ತನ್ನದೇ ಆದ ರೀತಿಯಲ್ಲಿ ಪ್ರತಿಕ್ರಿಯಿಸುತ್ತಾಳೆ.

ಮರೆದೊರಗಿ, ಕನಸ ಕಂಡು ಹೇಳುವಲ್ಲಿ
ಸತ್ತ ಹೆಣ ಎದ್ದಿತ್ತು
ತನ್ನ ಋಣ ನಿಧಾನ ಎದ್ದು ಕರೆದಿತ್ತು
ಹೆಪ್ಪಿಟ್ಟು ಹಾಲು ಗಟ್ಟಿತುಪ್ಪಾಗಿ ಸಿಹಿಯಾಗಿತ್ತು [೧೦]

ಎಂದು ನಿಸರ್ಗ ನಿಯಮಗಳನು ತನ್ನದೇ ಆದ ರೀತಿಯಲ್ಲಿ ಮುರಿದು ಕಟ್ಟಲು ಪ್ರಯತ್ನಿಸುತ್ತಾಳೆ. ಈ ರೀತಿ ಪ್ರಕೃತಿಯ ರೂಪಕಗಳನ್ನು ಬಳಸಿ ಸಮಾಜ, ಸಂಸ್ಕೃತಿ ಹಾಗೂ ಕೆಲವು ಸಿದ್ಧ ಮೌಲ್ಯಗಳನ್ನು ಕುರಿತಂತೆ ಪ್ರತಿಕ್ರಿಯಿಸುತ್ತಾಳೆ.

---

೯. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೩

೧೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೨೬೩

## ಗಂಡನ ಕಲ್ಪನೆ ಮತ್ತು ರೂಪಕಗಳಲ್ಲಿ ಚೆನ್ನಮಲ್ಲಿಕಾರ್ಜುನ

ಅಕ್ಕನ ವಚನಗಳಲ್ಲಿ ಕಂಡುಬರುವ ಚೆನ್ನಮಲ್ಲಿಕಾರ್ಜುನ ಒಬ್ಬ ವ್ಯಕ್ತಿಯಾಗಿ ಮಾತ್ರವಿರದೆ ಹಲವು ಅಂಶಗಳಿಗೆ ರೂಪಕವಾಗಿ ಕಂಡುಬರುತ್ತಾನೆ. ಆದರ್ಶ ಗಂಡಿಗೆ ಪ್ರಭುತ್ವದ ಕೇಂದ್ರೀಕರಣಕ್ಕೆ, ಒಬ್ಬ ಮಾದರಿ ಪ್ರಿಯಕರನಿಗೆ ಉದಾಹರಣೆಯಾಗಿದ್ದಾನೆ. ಜಗತ್ತಿನ ಸಮಷ್ಟಿಯ ಏಕೀಕರಣದ ರೂಪಕ ಅಕ್ಕನ ಚೆನ್ನಮಲ್ಲಿಕಾರ್ಜುನ.

ಚೆನ್ನಮಲ್ಲಿಕಾರ್ಜುನನ ಅಲೌಕಿಕ ವ್ಯಕ್ತಿತ್ವನ್ನು ಚಿತ್ರಿಸುವ ಮೂಲಕವೇ ಅಕ್ಕ ಅವನನ್ನು ಲೋಕದ ಒಬ್ಬ ಮಾದರಿ ವ್ಯಕ್ತಿಯನ್ನಾಗಿ ರೂಪಿಸಿದ್ದಾಳೆ. ಆದರ್ಶ ಗಂಡನನ್ನು ಚೆನ್ನಮಲ್ಲಿಕಾರ್ಜುನನ ಪ್ರತಿಮೆಯ ಮೂಲಕ ಕಟ್ಟಿಕೊಡಲು ಪ್ರಯತ್ನಿಸಿದ್ದಾಳೆ. ಅಲ್ಲದೆ ಇಲ್ಲಿ ಚೆನ್ನಮಲ್ಲಿಕಾರ್ಜುನ ಎಂಬ ಪದವೇ ಆದರ್ಶೀಕರಣಗೊಂಡ ಗಂಡನ ರೂಪಕವಾಗಿ ಬಳಕೆಯಾಗುತ್ತದೆ. ಚೆನ್ನಮಲ್ಲಿಕಾರ್ಜುನನ ಆಂತರಿಕ ವ್ಯಕ್ತಿತ್ವ ಹಾಗೂ ಬಾಹ್ಯ ವ್ಯಕ್ತಿತ್ವವೆರಡೂ ಕೂಡ ಉನ್ನತೀಕರಣಗೊಂಡ ಮಾದರಿ ವ್ಯಕ್ತಿಯೊಬ್ಬನ ಪ್ರತಿರೂಪವಾಗಿವೆ- ಪ್ರತಿಯೊಂದು ಹೆಣ್ಣು ತನ್ನ ಗಂಡ ಚೆಲುವನಾಗಿರಬೇಕೆಂದು ಬಯಸುವುದು ಸಹಜ. ಅದೇ ರೀತಿ ಅಕ್ಕ ಕೂಡ ರೂಪಿನಲ್ಲಿ ಯಾರಿಗೂ ಸರಿಸಾಟಿಯಿಲ್ಲದ ವ್ಯಕ್ತಿತ್ವವನ್ನು ಚೆನ್ನಮಲ್ಲಿಕಾರ್ಜುನನ ರೂಪಕದ ಮೂಲಕ ಕಟ್ಟಿಕೊಡುತ್ತಾಳೆ. ಅವನು ಎಲ್ಲರಂತೆ ಸಾಮಾನ್ಯ ವ್ಯಕ್ತಿಯಲ್ಲ "ರುಂಡ ಮಾಲೆಯ ಕೊರಳವನು, ಗೋವಿಂದನ ನಯನವನ್ನು ಉಂಗುರದಲ್ಲಿ ಧರಿಸಿದವನು" ಇಂತಹ ಅದ್ಭುತ ವ್ಯಕ್ತಿತ್ವದ ಸಂಪೂರ್ಣ ಚಿತ್ರ ಈ ವಚನದಿಂದ ತಿಳಿಯುತ್ತದೆ.

**ಹೊಳೆವ ಕೆಂಜೆಡೆಗಳ, ಮಣಿ ಮಕುಟದ, ಒಪ್ಪುವ ಸುಲಿಪಲ್ಗಳ**
**ನಗೆಮೊಗದ, ಕಂಗಳ ಕಾಂತಿಯ**
**ಈರೇಳು ಭುವನವ ಬೆಳಗುವ ದಿವ್ಯ ಸ್ವರೂಪನ ಕಂಡೆ ನಾನು**
**ಕಂಡೆನ್ನ ಕಂಗಳ ಬರ ಹಿಂಗಿತ್ತೆನಗೆ**
**ಗಂಡ ಗಂಡರೆಲ್ಲರ ಹೆಂಡಿರಾಗಿ ಆಳುವ**
**ಗರುವನ ಕಂಡೆ ನಾನು**
**ಜಗದಾದಿ ಶಕ್ತಿಯೊಳು ಬೆರೆಸಿ ಮಾತನಾಡುವ**
**ಪರಮ ಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು** ೧೧

ಹೊಳೆವ ಕೆಂಜಡೆ, ಮಣಿಮುಕುಟ, ಸಲಿಪಲ್ಗಳು, ನಗೆಮೊಗ ಕಾಂತಿಯುಳ್ಳ ಕಂಗಳು. ಇವೆಲ್ಲಾ ಚೆನ್ನಮಲ್ಲಿಕಾರ್ಜುನನ ಅಪಾರ ಚೆಲುವಿಕೆಯ ಲಕ್ಷಣಗಳಾಗಿವೆ. ಇಂತಹ ಚೆಲುವನನ್ನು ಯಾವ ಹೆಣ್ಣು ತಾನೇ ಬಯಸುವುದಿಲ್ಲ? ಅಲ್ಲದೆ

೧೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೫೨

ಅಕ್ಕ ಬಯಸುವುದು ಲೋಕಕ್ಕೆ ಹೆದರುವ ಗಂಡನನ್ನಲ್ಲ. ಇಡೀ ಲೋಕವನ್ನೇ ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವ ಅಗಾಧ ಶಕ್ತಿ ಸಾಮರ್ಥ್ಯಗಳಿರುವಂತಹ ಗಂಡನನ್ನು. ರೂಪಿನಲ್ಲಿ ಚೆಲುವು, ಒಲವಿನಲ್ಲಿ ಶಕ್ತಿ ಸಾಮರ್ಥ್ಯದಲ್ಲಿ ಯಾರಿಗೂ ಸರಿಸಾಟಿಯಿರದಂತಹ ವ್ಯಕ್ತಿ ಅಕ್ಕನ ಚೆನ್ನಮಲ್ಲಿಕಾರ್ಜುನ. ಇವನು ರೂಪದಲ್ಲಿ ಎಷ್ಟು ಸುಂದರನೋ ಅದೇ ರೀತಿ ಮಾನಸಿಕವಾಗಿ ಹಾಗೂ ದೈಹಿಕವಾಗಿ ಕೂಡ ಅಷ್ಟೇ ಪ್ರಭಾವಶಾಲಿಯಾಗಿದ್ದಾನೆ. ಗಂಡ ಗಂಡರನ್ನೆಲ್ಲ ಹೆಂಡಿರಾಗಿ ಆಳುವ ಗರುವ ಎಂದರೆ ಮಹಾನ್ ಧೈರ್ಯಶಾಲಿಗಳನ್ನೆಲ್ಲಾ ತನ್ನ ಅಧೀನಕ್ಕೆ ಒಳಪಡಿಸಿಕೊಂಡಿರುವಂತಹ ಅಹಂಕಾರಿ ಇವನು. ಕಡೆಗೆ ಇವನು ಈ ಎಲ್ಲಾ ರೂಪವನ್ನು ಮೀರಿ ಜಗದಾದಿ ಶಕ್ತಿಯೊಳು ಬೆರಸಿ ಮಾತನಾಡುವ ಎಂದರೆ ಜಗತ್ತಿನ ಚರಾಚರಗಳೆಲ್ಲದರಲ್ಲಿಯೂ ಕೂಡ ತನ್ನ ಇರುವಿಕೆಯನ್ನು ಸಂಸ್ಥಾಪಿಸಿರುವವನಾಗಿದ್ದಾನೆ.

ಮತ್ತೊಂದು ವಚನದಲ್ಲಿ ಚೆನ್ನಮಲ್ಲಿಕಾರ್ಜುನನ ರೂಪವನ್ನು ಕುರಿತಂತೆ ''ಹೊಳೆವ ಕೆಂಜಡೆಗಳ ಮೇಲೆ ಎಳೆವೆಳದಿಂಗಳು, ಫಣಿಮಣಿಕರ್ಣಕುಂಡಲ ಧರಿಸಿರುವವನು. ರುಂಡಮಾಲೆಯ ಕೊರಳವನು ಹಾಗೂ ಗೋವಿಂದನ ನಯನವನ್ನು ತನ್ನ ಕಾಲಲ್ಲಿ ಧರಿಸಿರುವವನು'' ಎಂದೆಲ್ಲ ವರ್ಣಿಸುತ್ತಾಳೆ. ಇಲ್ಲಿಯ ಎಳೆಯ ಬೆಳದಿಂಗಳು ಸಾಧುತ್ವಕ್ಕೆ ಪ್ರತೀಕವಾದರೆ ರುಂಡಮಾಲೆ ಕೊರಳವನು ಹಾಗೂ ಗಂಡ ಗಂಡರನೆಲ್ಲ ಹೆಂಡಿರಾಗಿ ಆಳುವ ಗರುವ ಈ ಎರಡೂ ರೂಪಕಗಳು ಪರಸ್ಪರ ಒಂದಕ್ಕೊಂದು ಸಂವಾದಿಯಾಗಿವೆ. ಇವುಗಳಲ್ಲಿ ಅನೇಕ ಬಲಿಷ್ಠರನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿರುವ ಅಂಶ ವ್ಯಕ್ತವಾಗುತ್ತಿದೆ. ಇಲ್ಲಿ ಒಬ್ಬ ಮಾದರಿ ಗಂಡಿನ ಚಿತ್ರಣವನ್ನು ಕಾಣಬಹುದು. ಪ್ರತಿಯೊಂದು ಹೆಣ್ಣು ಬಯಸುವುದು ಅಧಿಕಾರಸ್ಥ ಧೈರ್ಯಶಾಲಿಯಾದ ಹಾಗೂ ಸುರೂಪಿಯಾದ ಗಂಡನ್ನೇ. ಅಕ್ಕ ಕೂಡ ಅದೇ ರೀತಿ ಸುಂದರವೂ, ಮನೋಹರವೂ ಆದ ವ್ಯಕ್ತಿತ್ವವೊಂದನ್ನು ಈ ರೀತಿಯ ಅಲೌಕಿಕ ಪ್ರತಿಮೆಯ ಮೂಲಕ ಕಟ್ಟಿಕೊಟ್ಟಿದ್ದಾಳೆ ಎಂದೆನಿಸುತ್ತದೆ.

ಮನಸ್ಸಿನಲ್ಲಿ ಹುಟ್ಟುವ ಮಧುರವಾದ ಪ್ರೀತಿಗೆ ಹುಟ್ಟು- ಸಾವು ಎಂಬುದಿರುವುದಿಲ್ಲ. ಅದು ಶಾಶ್ವತವಾದದ್ದು ಹಾಗೂ ನಿತ್ಯ ನೂತನವಾದದ್ದು. ಇಂತಹ ಪ್ರೀತಿಯನ್ನು ಅಕ್ಕ ಬಯಸುತ್ತಾಳೆ. ಆದ್ದರಿಂದಲೇ ಅವಳು ಒಂದು ವಚನದಲ್ಲಿ ಚೆನ್ನಮಲ್ಲಿಕಾರ್ಜುನನ ಗುಣ ವೈಶಿಷ್ಟ್ಯಗಳನ್ನು ಈ ರೀತಿ ಹೇಳಿದ್ದಾಳೆ.

> ಸಾವಿಲ್ಲದೆ, ಕೇಡಿಲ್ಲದ, ರೂಹಿಲ್ಲದ, ಚೆಲುವಂಗೆ ನಾನೊಲಿದೆ
> ಎಡೆಯಿಲ್ಲದ, ಕಡೆಯಿಲ್ಲದ, ತೆರಹಿಲ್ಲದ, ಕುರುಹಿಲ್ಲದ
> ಚೆಲುವಂಗೆ ನಾನೊಲಿದೆ ಎಲೆ ಅವ್ವಗಳಿರಾ!
> ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ ನಾನು
> ಸೀಮೆ ಇಲ್ಲದ ನಿಸ್ಸೀಮ ಚೆಲುವಂಗೊಲಿದೆ ನಾನು. [೧೨]

ಎನ್ನುತ್ತಾಳೆ. ಹುಟ್ಟು ಸಾವು ಪ್ರಕೃತಿಯ ಸಹಜ ನಿಯಮ. ಆದರೆ ಅಕ್ಕ ಅವೆಲ್ಲವನ್ನೂ ಮೀರಿ ನಿಂತು ಶಾಶ್ವತವಾಗಿ

---

೧೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೩೨೩

ಉಳಿಯಬಲ್ಲ ಗಂಡ ತನ್ನವನಾಗಬೇಕೆಂದು ಬಯಸುತ್ತಾಳೆ. ಇಲ್ಲಿಯ ಚೆನ್ನಮಲ್ಲಿಕಾರ್ಜುನನಿಗೆ ಸಾವು-ಕೇಡು ಎರಡೂ ಇಲ್ಲ, ಜೊತೆಗೆ ಭವ - ಭಯ ಇಲ್ಲದ ನಿರ್ಭಯ, ಸೀಮೆ ಇಲ್ಲದ ನಿಸ್ಸೀಮ ಇವನು. ಈತನನ್ನು ದೈವಿಕ ವ್ಯಕ್ತಿತ್ವ ಎಂದು ಗ್ರಹಿಸಿದರೂ ಕೂಡ ಅದು ದೈವಿಕ ವ್ಯಕ್ತಿತ್ವವನ್ನು ಮೀರಿದ ಒಂದು ಮನಃಸ್ಥಿತಿ ಎಂಬುದು ಈ ವಚನದಿಂದ ತಿಳಿದು ಬರುತ್ತದೆ. ಅಕ್ಕ ಇರುವವರೆಗೂ ಚೆನ್ನಮಲ್ಲಿಕಾರ್ಜುನ ಅಮರ. ಅಕ್ಕ ಬಯಸುವ ಚೆನ್ನಮಲ್ಲಿಕಾರ್ಜುನ ಬೇರೆಲ್ಲೋ ಇರುವವನಲ್ಲ, ಅವನು ಅಕ್ಕನೊಳಗೇ ಅಂತರ್ಗತವಾಗಿರುವವನು ಎಂದರೆ ಹೆಣ್ಣನ್ನು ಹಲವು ಕಾರಣಗಳಿಂದ ಶೋಷಣೆಯ ಕೇಂದ್ರವಾಗಿಟ್ಟುಕೊಂಡಿದ್ದಂತಹ ಸಂದರ್ಭದಲ್ಲಿ ಅಕ್ಕ ಹೆಣ್ಣಿನ ಬಗೆಗೆ ಲೋಕದ ದೃಷ್ಟಿಕೋನವನ್ನು ಬದಲಿಸುವ ಸಲುವಾಗಿ ಪ್ರತಿಯೊಂದು ಹೆಣ್ಣು ಕೂಡ ತನ್ನೊಳಗೆ ಗಂಡಸುತನದ ಲಕ್ಷಣಗಳನ್ನು ರೂಪಿಸಿಕೊಳ್ಳಬೇಕು ಎಂಬ ಅಭಿಪ್ರಾಯವನ್ನೇ ವ್ಯಕ್ತಪಡಿಸಿರುವಂತಿದೆ. "ದ್ವೈತವಳಿದು ಅದ್ವೈತದಿಂದ ತಾನು ತಾನೆಂದರೆ ಚೆನ್ನಮಲ್ಲಿಕಾರ್ಜುನ ಲಿಂಗವು ತಾನೆ" ಎಂದು ಹೇಳುವ ಅಕ್ಕನ ಮಾತು ಇದಕ್ಕೆ ನಿದರ್ಶನವಾಗಿದೆ.

ಚೆನ್ನಮಲ್ಲಿಕಾರ್ಜುನ ಕೇವಲ ಒಬ್ಬ ವ್ಯಕ್ತಿಯಲ್ಲ, ಅವನು ಶ್ರೇಷ್ಠತೆಯ, ಸಮಗ್ರತೆ, ಸಮರ್ಪಕತೆಯ ಧ್ಯೋತಕ. ಗಂಡಿನಲ್ಲಿ ಇರಬೇಕಾದ ಸಮಗ್ರ ಲಕ್ಷಣಗಳನ್ನೆಲ್ಲಾ ತನ್ನೊಳಗೆ ಅಂತರ್ಗತವಾಗಿಸಿಕೊಂಡಿರುವ ಶ್ರೇಷ್ಠ ವ್ಯಕ್ತಿತ್ವದ ರೂಪಕವೇ ಅಕ್ಕನ ಚೆನ್ನಮಲ್ಲಿಕಾರ್ಜುನ.

## ಜೀವಂತಿಕೆ ಮತ್ತು ಹೋರಾಟದ ರೂಪಕವಾಗಿ ಅಕ್ಕನ ಬದುಕು ಮತ್ತು ಸಾಧನೆ

ಅಕ್ಕಮಹಾದೇವಿಯ ಹೆಸರು ಹಾಗೂ ಬದುಕೇ ಇಡೀ ಕನ್ನಡ ಸಾಹಿತ್ಯದಲ್ಲಿ ಒಂದು ರೂಪಕ. ತನಗಿಷ್ಟವಾದದ್ದನ್ನು ಪಡೆಯಲು, ಅದರಂತೆ ಬದುಕಲು, ಆಕೆ ಜೀವನದುದ್ದಕ್ಕೂ ನಡೆಸಿದ ಹೋರಾಟ, ಬದುಕಿದ ರೀತಿ ಅನನ್ಯ. ಭಕ್ತಿ, ಸಂಸಾರ, ಗಂಡ, ಸ್ತ್ರೀ ಸ್ವಾತಂತ್ರ್ಯ, ಮದುವೆ, ದಾಂಪತ್ಯ ಸುಖ ಮುಂತಾದ ಪರಿಕಲ್ಪನೆಗಳಿಗೆ ಹೊಸ ವ್ಯಾಖ್ಯಾನವನ್ನು ನೀಡಿದ್ದಾಳೆ. ಸಮಾಜ ಹಾಗೂ ಪುರುಷಶಾಹಿ ಪ್ರಭುತ್ವದ ವ್ಯವಸ್ಥೆಗಳನ್ನು ತನ್ನ ಬದುಕಿನ ಮುಖಾಂತರವೇ ಮುರಿದು ಕಟ್ಟುವ ಕೆಲಸ ಮಾಡಿದ್ದಾಳೆ. ಎಂ.ಆರ್.ಶ್ರೀ. ಹೇಳುವಂತೆ 'ಮಹಾದೇವಿಯಕ್ಕನ ಜೀವನ ಚರಿತ್ರೆ ಹೆಣ್ಣಿನ ಗೌರವ ಸಾಧನೆಯ, ಹೆಣ್ಣಿನ ಸ್ವಾತಂತ್ರ ಸಾಧನೆಯ, ಹೆಣ್ಣಿನ ಪರಮಾರ್ಥ ಸಾಧನೆಯ ಒಂದು ಮಹಾ ಪ್ರಕರಣ'.

ಪ್ರಥಮ ಬಾರಿಗೆ ಅಕ್ಕ ಸಾಂಪ್ರದಾಯಿಕ ಕಟ್ಟಳೆಗಳನ್ನೂ ಕಿತ್ತೊಗೆದು ತಾನು ಮೆಚ್ಚಿದ ವ್ಯಕ್ತಿಯೊಡನೆ ಬಾಳುವ ದಿಟ್ಟತನವನ್ನು ವ್ಯಕ್ತಪಡಿಸುತ್ತಾಳೆ. ಇಂತಹ ಸಂದರ್ಭದಲ್ಲಿ ಅಕ್ಕನಿಗೆ ಚೆನ್ನಮಲ್ಲಿಕಾರ್ಜುನ ಎಂಬ ಅಂಕಿತವೇ ಅಭಯಹಸ್ತವಾಗಿದೆ. ಈ ಚೆನ್ನಮಲ್ಲಿಕಾರ್ಜುನ ಅಕ್ಕನ ಪ್ರೇಮದ, ಅಭಯದ ಸಂಕೇತವಾಗಿದ್ದಾನೆ. ಅವನನ್ನು ಪಡೆಯಲು ಹಂಬಲಿಸುವುದರ ಮೂಲಕ ಸ್ವತಂತ್ರ ಅಸ್ತಿತ್ವದ ಹುಡುಕಾಟಕ್ಕೆ ಮುಂದಾಗುತ್ತಾಳೆ ಅಕ್ಕ. ಸಂಸಾರವೇ ಹೆಣ್ಣಿನ ಸರ್ವಸ್ವವಾಗಿದ್ದ ಸಂದರ್ಭದಲ್ಲಿ ತಂದೆ, ತಾಯಿ, ಬಂಧು - ಬಾಂಧವರಿಂದ ಕೂಡಿದ ಲೌಕಿಕ ಸಂಸಾರವನ್ನು ತೀವ್ರವಾಗಿ ವಿರೋಧಿಸುವುದರ ಮೂಲಕ ಅದರಿಂದ ಬಿಡುಗಡೆ ಪಡೆಯುತ್ತಾಳೆ. ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಮೀರಿ ತನ್ನ ಗಂಡನ ಆಯ್ಕೆಯಲ್ಲಿ ಸ್ವಂತಿಕೆಯನ್ನು ತೋರುವ ಅಕ್ಕ ತನ್ನ ಬದುಕನನ್ನು ತಾನೇ ರೂಪಿಸಿಕೊಳ್ಳುವ ಸಾಮರ್ಥ್ಯವನ್ನು ತೋರುತ್ತಾಳೆ.

ಹೆಣ್ಣು ಗಂಡಿನ ಆಶ್ರಯದಲ್ಲಿಯೇ ಬಾಳಬೇಕೆಂಬ ನಿಯಮವಿದ್ದ ಸಂದರ್ಭದಲ್ಲಿ ಅಕ್ಕ ಲೌಕಿಕ ಗಂಡನ ಅನುಪಸ್ಥಿತಿಯಲ್ಲಿಯೂ ತಾನು ಏಕಾಂಗಿಯಾಗಿ ಬದುಕಬಲ್ಲೆ ಎಂಬ ಅಂಶವನ್ನು ಎತ್ತಿಹಿಡಿಯುತ್ತಾಳೆ. ಅಲ್ಲದೆ 'ನಾಮದಲ್ಲಿ ಹೆಂಗೂಸೆಂಬ ಹೆಸರಾದರೇನು, ಭಾವಿಸಲು ಗಂಡು ರೂಪು ನೋಡಿ' ಎಂದು ಹೆಣ್ಣಿನ ದೌರ್ಬಲ್ಯಗಳನ್ನು ತೊಡೆದು ಹಾಕಿ ಗಂಡಿನ ಗುಣ ವಿಶೇಷತೆಗಳನ್ನು ತನ್ನಲ್ಲಿ ರೂಪಿಸಿಕೊಂಡಿರುವುದನ್ನು ವ್ಯಕ್ತಪಡಿಸುತ್ತಾಳೆ. ಚೆನ್ನಮಲ್ಲಿಕಾರ್ಜುನ ಹಾಗೂ ತಾನು ಬೇರೆ ಬೇರೆ ಅಲ್ಲ, ಒಬ್ಬರೊಳಗೊಬ್ಬರು ಒಂದಾಗಿ ಬೆರೆತ ಅನ್ಯೋನ್ಯ ದಾಂಪತ್ಯದ ಸಂಕೇತ ಎಂಬುದನ್ನು ವ್ಯಕ್ತಪಡಿಸುತ್ತಾಳೆ.

ಮದುವೆಯಂಥ ಸಾಮಾಜಿಕ ಬಂಧನಕ್ಕೆ ಒಳಗಾಗದೆ ಸ್ವತಂತ್ರ ಜೀವನದ ಇಂಗಿತ ವ್ಯಕ್ತಪಡಿಸುವ ಅಕ್ಕ ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯ ಪರವಾಗಿ ತನ್ನದೇ ಆದ ರೀತಿಯಲ್ಲಿ ವೈಯಕ್ತಿಕವಾಗಿ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ. ಅರಸನಾದ ಕೌಶಿಕನನ್ನು ವಿರೋಧಿಸುವುದರ ಮೂಲಕ ಪುರುಷ ಶಾಹಿ ಹಾಗೂ ರಾಜ್ಯಶಾಹಿ ಪ್ರಭುತ್ವದ ವಿರುದ್ಧ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸುತ್ತಾಳೆ.

ಅಕ್ಕನ ಮತ್ತೊಂದು ವಿಶೇಷತೆಯೆಂದರೆ ಅವಳು ತನ್ನ ಜೀವನದಲ್ಲಿ ಅಳವಡಿಸಿಕೊಂಡ ದಿಗಂಬರತದ ಪರಿಕಲ್ಪನೆ, ''ಮೈ ಬೆತ್ತಲೆಯಾದರೆ ಸಾಲದು ಮನ ಬೆತ್ತಲೆಯಾಗಬೇಕು'' ಎಂಬ ಮಾತು ಅವಳ ಬದುಕು ಹಾಗೂ ಸಾಧನೆಗೆ ವಿಶೇಷವಾದ ಅರ್ಥವಂತಿಕೆಯನ್ನು ನೀಡುತ್ತದೆ. ಹೆಣ್ಣಿನ ದೈಹಿಕ ಆಕರ್ಷಣೆಯೇ ಅವಳ ಇರುವಿಕೆಯ ಮೂಲ ನೆಲೆಯಾಗಿದ್ದ ಸಂದರ್ಭದಲ್ಲಿ ಅಕ್ಕ ಗಂಡಿನ ಮೋಹಕ್ಕೆ, ಪ್ರಭುತ್ವಕ್ಕೆ ಕಾರಣವಾದ ದೇಹದ ಬಗೆಗೆ ತಿರಸ್ಕಾರಭಾವ ವ್ಯಕ್ತಪಡಿಸುವುದರ ಮೂಲಕ ಹೋರಾಟವನ್ನು ಆರಂಭಿಸುತ್ತಾಳೆ. ದೇಹವನ್ನು ಮರೆ ಮಾಡಿ ಲೌಕಿಕ ಭೋಗಾಸಕ್ತಿಗೆ ಕಾರಣವಾದ ವಸ್ತುವನ್ನು ನಿರಾಕರಿಸುವದರ ಮೂಲಕ ದೇಹಕ್ಕಿಂತ ಮನಸ್ಸು ಮುಖ್ಯ ಎಂಬ ಅಂಶವನ್ನು ಸಾಬೀತುಪಡಿಸುತ್ತಾಳೆ. ಅವಳ ವಸ್ತ್ರ ನಿರಾಕರಣ ಪ್ರಕ್ರಿಯೆ ಸಮಾಜಕ್ಕೆ ಪುರುಷ ಶಾಹಿ ಪ್ರಭುತ್ವಕ್ಕೆ ತೋರಿದ ಉಗ್ರ ಪ್ರತಿಭಟನೆಯ ರೂಪಕವಾಗಿದೆ.

ಒಟ್ಟಾರೆ ಅಕ್ಕನ ಬದುಕು ಹಾಗೂ ಸಾಧನೆ ಆಧುನಿಕ ಸ್ತ್ರೀ ಸಮಾಜಕ್ಕೆ ಸ್ತ್ರೀ ಸ್ವಾತಂತ್ರ್ಯದ, ಸ್ತ್ರೀ ಸಂವೇದನೆಯ, ಪ್ರೇಮ ಕಾಮದ ಸಂಘರ್ಷದಲ್ಲಿ ಪ್ರೇಮವೇ ಗೆದ್ದು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಸ್ವಇಚ್ಛಾಶಕ್ತಿಯ ಮನೋಭಾವವುಳ್ಳ ಧೈರ್ಯ, ಸ್ಥೈರ್ಯ, ಸಾಹಸದ ಒಬ್ಬ ಆದರ್ಶ ಸ್ತ್ರೀಯ ರೂಪಕವಾಗಿ ಕಂಡುಬರುತ್ತದೆ.

# ೪

# ವಚನಕಾರ್ತಿಯರಲ್ಲಿ ಪ್ರತಿಭಟನೆ

12ನೇ ಶತಮಾನ ಸಾಮಾಜಿಕ ಸ್ಥಿತ್ಯಂತರದ ಮೂಲನೆಲೆ. ಈ ಕಾಲದಲ್ಲಿ ಉಂಟಾದ ಸಾಮಾಜಿಕ ಬದಲಾವಣೆ ಹಲವು ರೀತಿಯ ವಿಚಾರ ಕ್ರಾಂತಿಗೆ ನಾಂದಿಯಾಯಿತು. ವಚನ ಸಾಹಿತ್ಯದ ಮೂಲಕ ಇಡೀ ಸಮಾಜವನ್ನು ಸಮುದಾಯವನ್ನು ತಿದ್ದುವ ವಿಮರ್ಶಿಸುವ ಕಾರ್ಯಗಳು ಭರದಿಂದ ನಡೆದವು. ಸಮಾಜಿಕ ವ್ಯವಸ್ಥೆಯ ವಿಡಂಬನೆ ಹಾಗೂ ಅವರ ಲೋಪದೋಷಗಳ ವಿಮರ್ಶೆಯ ಕಾರ್ಯ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನರೀತಿಯಲ್ಲಿ ಅಭಿವ್ಯಕ್ತವಾಯಿತು. ಈ ಹಂತದಲ್ಲಿ ಮಹಿಳೆಯರು ವಚನ ರಚನೆಯ ಮೂಲಕ ಸಮಾಜ ವಿಮರ್ಶೆಗೆ ಅದರ ವಿರುದ್ಧದ ಪ್ರತಿಭಟನೆಗೆ ಮುಂದಾದದ್ದು ಮಹತ್ವದ ಸಂಗತಿ. ದೊರೆತಿರುವ ಆಧಾರಗಳ ಪ್ರಕಾರ ಬಸವ ಯುಗದಲ್ಲಿ 34 ಜನ ಮಹಿಳೆಯರು ವಚನಗಳನ್ನು ರಚಿಸಿದ್ದರಾದರೂ ಸಂಖ್ಯೆ, ವಿಷಯ, ವಸ್ತು, ಸಾಹಿತ್ಯಿಕ ಮೌಲ್ಯವನ್ನು ಗಮನಿಸಿದಾಗ ಒಬ್ಬರಿಗಿಂತ ಒಬ್ಬರ ರೀತಿ ಭಿನ್ನವಾದುದ್ದಾಗಿದೆ. ಅಕ್ಕನ ವಚನಗಳಲ್ಲಿ ಕಂಡು ಬರುವ ವಿಚಾರ ಪರತೆ, ತಾತ್ವಿಕ ಚಿಂತನೆ, ಆತ್ಮನಿರೀಕ್ಷಣಾ ಕ್ರಮ ಸಾಮಾಜಿಕ ವ್ಯವಸ್ಥೆಯ ವಿರುದ್ಧ ತೀವ್ರ ಪ್ರತಿಭಟನೆ ಸಾಹಿತ್ಯಿಕ ಮೌಲ್ಯವನ್ನು ಉಳಿದ ವಚನಕಾರ್ತಿಯರಲ್ಲಿ ಕಾಣುವುದು ಕಡಿಮೆ. ತಾತ್ವಿಕ ಚಿಂತನೆ ಹಾಗೂ ಪ್ರಭುದ್ಧತೆಯ ದೃಷ್ಟಿಯಿಂದ ಅಕ್ಕನಿಗೆ ಸರಿ ಸಮಾನವಾಗಿ ನಿಲ್ಲಬಲ್ಲವಳು ಮುಕ್ತಾಯಕ್ಕ ಆದರೆ ಅಕ್ಕನ ರೀತಿಯ ಸಮಾಜ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಇವಳಲ್ಲಿ ಕಂಡು ಬರುವುದಿಲ್ಲ. ಈ ಹಿನ್ನೆಲೆಯಲ್ಲಿ ವಚನಕಾರ್ತಿಯರ ವಚನಗಳನ್ನು ಅಧ್ಯಯನ ಮಾಡಿದಾಗ ವಸ್ತು, ವಿಷಯದ ದೃಷ್ಟಿಯಿಂದ ಈ ರೀತಿ ವಿಂಗಡಿಸಬಹುದು.

★ ತಾತ್ವಿಕತೆ ಮತ್ತು ಬೋಧನಾ ಪ್ರಧಾನವಾಗಿ ಬರೆದ ವಚನಕಾರ್ತಿಯರು.

★ ಸಮಾಜ ವಿಮರ್ಶೆ ಮತ್ತು ಸಮಾಜ ವಿಡಂಬನೆಯನ್ನು ಕೇಂದ್ರವಾಗಿಸಿಕೊಂಡು ಬರೆದ ವಚನಕಾರ್ತಿಯರು.

★ ಬಸವ ಸ್ತುತಿ ಮತ್ತು ವೈಯಕ್ತಿಕ ಸಂಗತಿಗಳನ್ನು ತಿಳಿಸುವ ವಚನಕಾರ್ತಿಯರು.

ಬಹುತೇಕ ವಚನಕಾರ್ತಿಯರ ವಚನಗಳನ್ನು ಗಮನಿಸಿದಾಗ ತಾತ್ವಿಕತೆ ಮತ್ತು ಭೋದನಾ ಪ್ರಧಾನವಾದ ವಚನ ರಚನಾ ಶೈಲಿಯನ್ನು ಕಾಣಬಹುದು. ಅದರಲ್ಲೂ ವ್ರತ, ಆಚರಣೆ,

ನೇಮ, ಶೀಲ ಮುಂತಾದ ವಿಷಯಗಳ ಬಗೆಗೆ ಇವರು ಹೆಚ್ಚು ಆಸಕ್ತಿಯನ್ನು ತೋರಿದ್ದಾರೆ. ವ್ರತ ಅದರ ನಿಯಮ ಆಚರಣೆಯನ್ನು ಕುರಿತಂತೆ ಬಹುತೇಕ ವಚನಕಾರ್ತಿಯರು ವಿಮರ್ಶೆಮಾಡುವುದರ ಜೊತೆಗೆ ವ್ರತ ಭ್ರಷ್ಟರು, ಆಚಾರ ಹೀನರು, ವೇಷಧಾರಿಗಳನ್ನು ಕಟುವಾಗಿ ಟೀಕಿಸಿದ್ದಾರೆ. ವ್ರತಾಚಾರವನ್ನು ಕುರಿತಂತೆ ಪ್ರತಿಯೊಬ್ಬರೂ ತಮ್ಮದೇ ಆದ ಸ್ವತಂತ್ರ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ''ಹಿಡಿದ ವ್ರತ ಬಿಡದಿರಲು ಅದೇ ಮಹಾಜ್ಞಾನದಾಚರಣೆ'' ಎಂದು ಮುಕ್ತಾಯಕ್ಕ ಜ್ಞಾನ ಮತ್ತು ವ್ರತದ ನಡುವಿನ ಬಂಧವನ್ನು ವಿವರಿಸಿದರೆ ಅಕ್ಕಮ್ಮ ''ಪರಸ್ತ್ರೀ ಪರಧನಗಳಲ್ಲಿ ನಿಂದೆಗೆ ಬಿಡಲಾಗದಿದ್ದುದೆ ವ್ರತ ; ಸರ್ವಭೂಹಿತನಾಗಿ ದಯವಿದ್ದುದೆ ಆಚಾರ'' ಎಂದು ವ್ರತ ಮತ್ತು ಆಚಾರದ ನಿಯಮಗಳನ್ನು ತಿಳಿಸಲು ಪ್ರಯತ್ನಿಸುತ್ತಾಳೆ. ಮತ್ತೊಂದು ವಚನದಲ್ಲಿ ''ಕಾಮಿಗೆ ವ್ರತವುಂಟೆ ನಿಃ ಕಾಮಿಗಲ್ಲದೆ, ಕ್ರೋಧಿಗೆ ವ್ರತವುಂಟೆ, ಸಮಾಧಾನಿಗಲ್ಲದೆ ? ಲೋಭಿಗೆ ವ್ರತವುಂಟೆ, ಉದಾರಿಗಲ್ಲದೆ'' ಎಂದು ವ್ರತಾಚರಣೆಯಲ್ಲಿ ಭಾಗಿಯಾಗಲು ಯಾರು ಅರ್ಹರು ಎಂಬುದನ್ನು ಕುರಿತು ಚರ್ಚಿಸುತ್ತಾಳೆ. ಮತ್ತೊಬ್ಬ ವಚನಕಾರ್ತಿ ಲಕ್ಕಮ್ಮ ''ಆಯುಷ್ಯ ತೀರಲು ಮರಣ ; ವ್ರತ ತಪ್ಪಲು ಶರೀರ ಕಡೆ : ಮೇಲು ವ್ರತವೆಂಬ ತೂತರ ಮೆಚ್ಚ ನಮ್ಮ ಅಜಗೇಶ್ವರ ಲಿಂಗವು'' ಎಂದು ತೋರಿಕೆಯ ವ್ರತದ ನಿಷ್ಪ್ರಯೋಜಕತೆಯನ್ನು ಎತ್ತಿಹಿಡಿದ್ದಾಳೆ. ಎಲ್ಲರೂ ಕಾಯಕಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರೆ ಬಾಚಿ ಕಾಯಕದ ಕಾಳವ್ವೆ ''ಕಾಯಕ ತಪ್ಪಿದಡೆ ಸೈರಿಸಬಾರದು ; ವ್ರತ ತಪ್ಪಿದಡಂತೂ ಸೈರಿಸಬಾರದು'' ಎಂದು ವ್ರತಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದಾಳೆ. ಸತ್ಯಕ್ಕ ವ್ರತಕ್ಕೆ ವಿಶಿಷ್ಟವಾದ ಅರ್ಥವನ್ನು ನೀಡಲು ಪ್ರಯತ್ನಿಸುತ್ತಾಳೆ. ''ಅರ್ಚನೆ ಪೂಜನೆ ನೇಮವಲ್ಲ ಮಂತ್ರ ತಂತ್ರ ನೇಮವಲ್ಲ, ಧೂಪ ದೀಪಾರತಿ ನೇಮವಲ್ಲ. ಪರದನ, ಪರಸ್ತ್ರೀ, ಪರದೈವಂಗಳಿಗೆರಗದಿಪ್ಪುದೇ ನೇಮ'' ಎನ್ನುತ್ತಾಳೆ. ವಚನಕಾರ್ತಿಯರ ವ್ರತಾಚರಣೆಯ ಬಗೆಗಿನ ಅಭಿಪ್ರಾಯವನ್ನು ಸಮಗ್ರವಾಗಿ ಗ್ರಹಿಸಿದಾಗ ಸಾಮಾನ್ಯವಾಗಿ ಇವರು ವ್ರತ, ನೇಮ, ಶೀಲದಂತ ಸಾಮಾಜಿಕ ಆಚರಣೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತಾರಾದರೂ ಸಾಂಪ್ರದಾಯಿಕ ರೀತಿಯ ವ್ರತಾಚರಣೆಯ ವಿಧಾನವನ್ನು ಕಡೆಗಣಿಸಿ ಅದಕ್ಕೆ ತಮ್ಮದೇ ಆದ ರೀತಿಯ ವ್ಯಾಖ್ಯಾನವನ್ನು ಕೊಡಲು ಪ್ರಯತ್ನಿಸಿದ್ದಾರೆ. ಈ ಪ್ರಯತ್ನದ ಮೂಲಕ ಅವರು ಸಮಾಜದ ಆಗು ಹೋಗುಗಳನ್ನು ಕುರಿತಂತೆ ತಮ್ಮದೇ ಆದ ರೀತಿಯಲ್ಲಿ ಮೆಲುನುಡಿಯ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ. ಎಲ್ಲರ ರೀತಿ ಮಾರ್ಗ, ದೃಷ್ಟಿಕೋನ ಒಂದೇ ಅಲ್ಲದಿದ್ದರೂ ಕೂಡ ಕೆಲವರ ಆಲೋಚನೆ, ಅಭಿಪ್ರಾಯಗಳನ್ನು ಗುರುತಿಸಿದಾಗ ಇವರು ಸಾಮಾಜಿಕ ವ್ಯವಸ್ಥೆಗೆ ಪ್ರತಿಕ್ರಿಸಿದ ರೀತಿ ಒಂದೇ ಎಂದೆನಿಸುತ್ತದೆ. ಕೆಲವರದು ತಾಳ್ಮೆಯ ಸಾತ್ವಿಕಮಾರ್ಗವೆಂದರೆ ಕೆಲವರದು ರೋಷದ ಪ್ರತಿಭಟನೆಯ ಮಾರ್ಗ.

ವಚನಕಾರ್ತಿಯರ ವಚನಗಳನ್ನು ಗಮನಿಸಿದಾಗ ಕಂಡುಬರುವ ಮತ್ತೊಂದು ಸಾಮಾನ್ಯ ಅಂಶವೆಂದರೆ ಲೋಕ ನೀತಿ, ಸಮಾಜಿಕ ವ್ಯವಸ್ಥೆ, ವ್ರತಭ್ರಷ್ಟರು, ಆಚಾರಹೀನರನ್ನು ನಿಂದಿಸುವ ಬಗೆ, ಸಾಮಾನ್ಯವಾಗಿ ಭಕ್ತಿ, ವೈರಾಗ್ಯ, ಪೂಜೆ ಇವೆಲ್ಲಕ್ಕೂ ಸಿದ್ಧಮಾದರಿಯ ಅರ್ಥವೊಂದಿದೆ. ಈ ಅರ್ಥವನ್ನು ಒಡೆಯುವ, ವಿಭಿನ್ನಾರ್ಥವನ್ನು ಚರ್ಚಿಸುವ ವಚನಕಾರ್ತಿಯರು ಹಲವು ಉಪಮ, ರೂಪಕಗಳ ಮೂಲಕ ಢಾಂಬಿಕ ಭಕ್ತನ ಅಸ್ತಿತ್ವವನ್ನು ಅಪಹಾಸ್ಯಮಾಡುತ್ತಾರೆ.

**ತೊಬರ ಬಳ್ಳಿಯಂತೆ ಉರಿವಾತ**
**ಹಸಿದು ತಂದು ಮಾಡುವಾತ**
**ಭಕ್ತರ ಕುಲವನೆತ್ತಿ ನಿಂದಿಸುವಾತ**
**ಒಡೆಯರೆಂಬ ತುಡುಗುಣಿಗಳು ಪೂಜೆಗೊಂಬಲ್ಲಿ ಅವರ ಮನೆಗೆ**
**ಹೂ, ಹಣ್ಣು ಕಾಯಿ ಪತ್ರೆಗಳ ತರುವ**
**ಹೋಗುವ ಬರುವ ಊಳಿಗವ ಕೊಂಬಾತ ಭಕ್ತನಲ್ಲ** [೧]

೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕ.ಸಂ.ನಿ. ಪ್ರಕಟಣೆ. ಪ್ರಸ್ತಾವನೆ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಪುಟ. ೨೨

ಎಂದು ಕಾಳವ್ವ ನಿಜಭಕ್ತನ ಕಾರ್ಯ ವೈಖರಿಯನ್ನು ಕುರಿತು ಚರ್ಚಿಸುತ್ತಾಳೆ. ಕೋಪ-ನಿಂದೆ, ಹಿಂಸೆಗಳಿಂದ ಮಾಡುವ ಭಕ್ತಿ ಭಕ್ತಿಯಲ್ಲ ಒಳ್ಳೆಯ ಮನಸ್ಸಿನಿಂದ ಮಾಡುವ ನೇಮವೇ ಭಕ್ತಿ, ಅಂತರಂಗ ಬಹಿರಂಗ ಶುದ್ಧವಿರುವವನೇ ಭಕ್ತ ಎಂದು ಭಕ್ತಿ ಭಕ್ತನ ಸ್ವರೂಪಕ್ಕೆ ಹೊಸ ವ್ಯಾಖ್ಯಾನವನ್ನು ನೀಡಿದ್ದಾಳೆ. ಇದೇ ಅಂಶವನ್ನು ಲಿಂಗಮ್ಮ "ಅಂತರಂಗ-ಬಹಿರಂಗ ಶುದ್ಧಿಯಿಲ್ಲದೆ ನುಡಿವ ಸಂತೆಯ ಸೂಳೆಯರು" ಎಂದು ಢಾಂಬಿಕ ಭಕ್ತರನ್ನು ಕಟುವಾಗಿ ಟೀಕಿಸುತ್ತಾಳೆ.

ಬಸವಣ್ಣನ ಲಾಂಛನಕ್ಕೆ ಶರಣೆಂಬೆ ಎಂಬ ತತ್ವವನ್ನು ಕೂಡ ವಿರೋಧಿಸುವ ಮನೋಭಾವ ಈ ವಚನಕಾರ್ತಿಯರದು "ವೇಶವೆಲ್ಲಿರದು? ಸೂಳೆಯಲ್ಲಿ, ದೊಂಬರಲ್ಲಿ, ಬೈರೂಪಿಗಳಲ್ಲಿ ಇರದೆ ? ವೇಶವ ತೋರಿ ಒಡಲ ಹೊರೆವ ದಾಸಿವೇಶಿಯ ಮಕ್ಕಳಿಗೆ ನಿಜ ಭಕ್ತಿ ಎಲ್ಲಿಯದು?" ಎಂದು ಕಪಟ ವೇಶಧಾರಿಗಳನ್ನು ವಿರೋಧಿಸುತ್ತಾಳೆ ಅಕ್ಕಮ್ಮ. ಅಂತೆಯೇ ಅಮ್ಮುಗೆ ರಾಯಮ್ಮ ಕೂಡ ಇಂತಹ ಕಪಟ ವೇಶಧಾರಿಗಳನ್ನು "ಕುಂಜನರ ವೇಷವ ತೊಟ್ಟು ಹಂದಿಯಂತೆ ತಿರುಗುವ ಅಜ್ಞಾನಿಗಳು" ಎಂದು ನಿಂದಿಸುತ್ತಾಳೆ. ಸಮಾಜದ ಒಂದು ಭಾಗವಾದ ಭಕ್ತಿ ಸಮುದಾಯದ, ನೈತಿಕತೆ ಮತ್ತು ಅವಿವೇಕದ ಗುಣಗಳನ್ನು ಧೈರ್ಯವಾಗಿ ಎತ್ತಿತೋರಿಸುವ ಅದನ್ನು ವಿರೋಧಿಸುವ ಮೂಲಕ ಈ ವಚನಕಾರ್ತಿಯರು ಸಾಂಪ್ರದಯಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ.

ಭಕ್ತಿ ಪರಾಕಾಷ್ಟೆಯ ಮತ್ತೊಂದು ವೇಷ-ಸಂನ್ಯಾಸಿ. ಈ ಸಂನ್ಯಾಸಿಗಳ ಲಕ್ಷಣ ಬೆತ್ತಲೆಯಾಗಿ ತಲೆ ಬೋಳಿಸಿಕೊಂಡು ಕಾವಿಯುಡುಗೆಯುಟ್ಟು ತಿರುಗುವುದು. ಅಂತರಂಗದಲ್ಲಿ ಭಕ್ತಿ ಇಲ್ಲದ ಇಂತಹ ವೇಶಧಾರಿಗಳನ್ನು ಸಹ ವಚನಕಾರ್ತಿಯರು ಪ್ರಬಲವಾಗಿ ವಿರೋಧಿಸುತ್ತಾರೆ. "ಬೆತ್ತಲೆಯಿದ್ದವರೆಲ್ಲ ಕತ್ತೆಯ ಮಕ್ಕಳು, ತಲೆ ಬೋಳಾದವರೆಲ್ಲ ಮುಂಡೆಯ ಮಕ್ಕಳು, ತಲೆ ಜಡೆಗಟ್ಟಿದವರೆಲ್ಲ ಹೊಲೆಯರ ಸಂತಾನ" (ಅಕ್ಕಮ್ಮ) "ಗಡ್ಡ ಮಂಡೆಯ ಬೋಳಿಸಿ ಕೊಂಡವರೆಲ್ಲ ಕಬ್ಬಲಿಗರ ಮಕ್ಕಳು, ಬೆತ್ತಲೆ ಇದ್ದವರೆಲ್ಲ ಕುಂಚಿಗನ ಮಕ್ಕಳು"(ಅಮ್ಮುಗೆ ರಾಯಮ್ಮ) ಎಂದು ಸಂನ್ಯಾಸದ ಸಾಂಪ್ರದಾಯಿಕ ರೂಪುರೇಶೆಗಳನ್ನು ಕಟುವಾಗಿ ನಿಂದಿಸುವ ಧೈರ್ಯವನ್ನು ತೋರುತ್ತಾರೆ. ಇಂತಹವರನ್ನು "ಹೋತಿನ ಗಡ್ಡದಂತೆ ಗಡ್ಡದ ಹಿರಿಯರು ನೋಡಾ" ಎಂದು ಅಕ್ಕಮ್ಮ ಅಪಹಾಸ್ಯ ಮಾಡುವ ಮೂಲಕ ವಿರೋಧಿಸುತ್ತಾಳೆ. ಈ ರೀತಿ ಇವರು ತಮ್ಮ ವಚನಗಳಲ್ಲಿ ಸಮಾಜದ ಪ್ರಮುಖ ಪರಿಕಲ್ಪನೆಗಳನ್ನು ಪರೀಕ್ಷಿಸುವ ವಿಮರ್ಶೆಗೆ ಒಳಪಡಿಸುವ ಅದಕ್ಕೆ ಸರಿದಾರಿಯನ್ನು ತೋರುವ ಮೂಲಕ ಸೂಕ್ಷ್ಮವಾಗಿ ಸಾಮಾಜಿಕ ವ್ಯವಸ್ಥೆಯ ವಿರುದ್ಧ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಗುರು-ಲಿಂಗ-ಜಂಗಮರನ್ನು ಈ ವಚನಕಾರ್ತಿಯರು ಗ್ರಹಿಸುರುವ ಬಗೆ ಕೂಡ ವಿಶಿಷ್ಟವಾದದ್ದು. ಅಮ್ಮುಗೆ ರಾಯಮ್ಮ

> ಅರಿವುಳ್ಳವರಿಗೆ ಗುರುವಿನ ಹಂಗೇಕೆ?
> ಅರಿವುಳ್ಳವರಿಗೆ ಲಿಂಗದ ಹಂಗೇಕೆ?
> ಅರಿವುಳ್ಳವರಿಗೆ ಜಂಗಮದ ಹಂಗೇಕೆ?
> ಅರಿವುಳ್ಳವರಿಗೆ ಪಾದೋದಕ ಪ್ರಸಾದದ ಹಂಗೇಕೆ? [೨]

ಎಂದು ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕಕ್ಕಿಂತ ಅರಿವೇ ಮುಖ್ಯ. ತನ್ನನ್ನು ತಾನು ಅರಿತವನಿಗೆ ಇದಾವುದರ ಹಂಗೂ ಇಲ್ಲ ಎಂದು ಗುರು, ಲಿಂಗ, ಜಂಗಮದ ಮಹತ್ವವನ್ನು ನಿರಾಕರಿಸುತ್ತಾಳೆ. ಆದರೆ ಗಜೇಶ ಮಸಣಯ್ಯಗಳ

೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕ.ಸಂ.ನಿ. ಪ್ರಕಟಣೆ. ಪ್ರಸ್ತಾವನೆ. ಅಮ್ಮುಗೆ ರಾಯಮ್ಮ ಪುಟ. ೧೯

ಪುಣ್ಯಶ್ರೀ ''ಶಿವನೇ ಗುರುವಾಗಿ, ಲಿಂಗವಾಗಿ, ಜಂಗಮವಾಗಿ, ಭಕ್ತನಾಗಿ ತೋರುತ್ತಾನೆ. ಇವರಿಗೆ ಭಾಜನ ವೊಂದೇ, ಭೋಜನವೊಂದೇ'' ಎಂದು ಗುರು ಲಿಂಗ ಜಂಗಮ ಶಿವನ ವಿಭಿನ್ನ ರೂಪಗಳು ಎಂದು ಅವರಿಗೆ ದೈವತ್ವದ ನೆಲೆಯನ್ನು ಕಲ್ಪಿಸಿ ಕೊಡುತ್ತಾಳೆ. ಗುರು ಲಿಂಗ ಜಂಗಮಕ್ಕೆ ಅವರದ್ದೇ ಆದ ರೀತಿಯ ಆಚಾರದ ಅನುಸರಣೆಯಿರಬೇಕು. ಇಲ್ಲವಾದಲ್ಲಿ ಅದನ್ನು ಅನುಸರಿಸುವುದು ನಿಷ್ಪ್ರಯೋಜಕ ಎನ್ನುತ್ತಾಳೆ, ಅಕ್ಕಮ್ಮ. ಒಟ್ಟಾರೆ ಪ್ರತಿಯೊಬ್ಬರೂ ಕೂಡ ಗುರು-ಲಿಂಗ-ಜಂಗಮ ಪರಿಕಲ್ಪನೆಯನ್ನು ತಮ್ಮದೇ ಆದ ರೀತಿಯಲ್ಲಿ ಅರ್ಥೈಸಿಕೊಂಡಿದ್ದಾರೆ. ಮುಕ್ತಾಯಕ್ಕ

**ಎನ್ನಭಾವಕ್ಕೆ ಗುರುವಾದನಯ್ಯಾ ಬಸವಣ್ಣನು.**
**ಎನ್ನ ನೋಟಕ್ಕೆ ಲಿಂಗವಾದನಯ್ಯಾ ಚೆನ್ನ ಬಸವಣ್ಣನು.**
**ಎನ್ನ ಜ್ಞಾನಕ್ಕೆ ಜಂಗಮವಂದನಯ್ಯಾ ಪ್ರಭುದೇವರು.**[೩]

ಎಂದು ತನ್ನ ಸಮಕಾಲೀನ ವಚನಕಾರರಲ್ಲಿ ಗುರು-ಲಿಂಗ-ಜಂಗಮರ ಅಸ್ತಿತ್ವವನ್ನು ಹುಡುಕುತ್ತಾಳೆ. ನೀಲಮ್ಮ ತನಗೆ ಗುರು-ಲಿಂಗ-ಜಂಗಮ ಎಲ್ಲವೂ ಬಸವಣ್ಣನೇ ಎಂದು ಬಸವಣ್ಣನ ಅನನ್ಯತೆಯನ್ನು ಎತ್ತಿ ಹಿಡಿದಿದ್ದಾಳೆ. ಇವರೆಲ್ಲರಿಗಿಂತ ವಿಭಿನ್ನರೀತಿಯಲ್ಲಿಗುರು-ಲಿಂಗ-ಜಂಗಮದ ಕಲ್ಪನೆಯನ್ನು ಕುಟುಂಬದ ಚೌಕಟ್ಟಿನಲ್ಲಿ ರೂಪಿಸಿಕೊಂಡವಳು ಅಕ್ಕನಾಗಮ್ಮ.

**ಶ್ರೀ ಗುರುವೆ ತಾಯಿ ತಂದೆಯಾಗಿ, ಲಿಂಗವೆ ಪತಿಯಾಗಿ,**
**ಜಂಗಮವೆ ಅತ್ತೆ-ಮಾವಂದಿರಾಗಿ, ಶಿವಭಕ್ತರೆ ಬಾಂಧವರಾಗಿ,**
**ಸತ್ಯ ಸದಾಚಾರವೆಂಬ ಮನೆಗೆ ಕಳುಹಿಸಿದರಾಗಿ,**
**ಶರಣಸತಿ ಎಂಬ ನಾಮ ನಿಜವಾಯಿತ್ತು.**[೪]

ಎಂದು ಕುಟುಂಬ ವ್ಯವಸ್ಥೆಯ ಒಳಗೇ ಆಧ್ಯಾತ್ಮ ಸಾಧನೆಗೆ ಅಗತ್ಯವಾದ ಪರಿಸರವನ್ನು ರೂಪಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಅದನ್ನು ತಮ್ಮದೇ ಆದ ರೀತಿಯಲ್ಲಿ ಕಲ್ಪಿಸಿಕೊಳ್ಳುವ ಮೂಲಕ ವಚನಕಾರ್ತಿಯರು ಪರಂಪರಾಗತ ನಂಬಿಕೆಯ ವಿರುದ್ಧ ಪ್ರತಿಭಟನೆಯನ್ನು ಆರಂಭಿಸಿದರು.

ಅಂದಿನ ಸಮಾಜದಲ್ಲಿ ವ್ಯಕ್ತಿಯ ಮೌಲ್ಯನಿರ್ಣಯಕ್ಕೆ ಸಂಬಂಧಿಸಿದಂತೆ ಅತ್ಯಂತ ಪ್ರಮುಖ ಪಾತ್ರವಹಿಸುತ್ತಿದ್ದುದ್ದು ಜಾತಿ ಪದ್ಧತಿ ಜಾತಿಯೇ ಕಾರಣವಾಗಿ ವ್ಯಕ್ತಿಯನ್ನೇ ಮೇಲು, ಕೀಳು, ಸ್ಪೃಶ್ಯ, ಅಸ್ಪೃಶ್ಯ ಎಂದು ವಿಭಾಗಿಸಲಾಗಿತ್ತು. ಇಂತಹ ಜಾತಿವ್ಯವಸ್ಥೆಯ ವಿರುದ್ಧ ಅತ್ಯಂತ ತೀವ್ರವಾದ ಹೋರಾಟವನ್ನು ಆರಂಭಿಸಿದವರು. 12ನೇ ಶತಮಾನದ ಬಸವಾದಿ ವಚನಕಾರರು ಇದರಲ್ಲಿ ವಚನಕಾರ್ತಿಯರ ಕೊಡುಗೆ ಸಹ ಪ್ರಮುಖವಾದದ್ದು. ಶೂದ್ರರು ಅದರಲ್ಲೂ ಹೆಂಗಸರಿಗೆ ಯಾವುದೇ ರೀತಿಯ ಸ್ವಾತಂತ್ರ್ಯವಿಲ್ಲ ಎಂಬ ಸಂದರ್ಭದಲ್ಲಿ ಉರಿಲಿಂಗ ಪೆದ್ದಿಗಳ ಪುಣ್ಯಶ್ರೀ ಕಾಳವ್ವ ವಚನ ರಚನೆಗೆ ಮುಂದಾದದ್ದೇ ಒಂದು ರೀತಿಯ ಪ್ರತಿಭಟನೆ. ಅಲ್ಲದೆ ಅವಳು ತನ್ನ ವಚನಗಳಲ್ಲಿ ಬ್ರಾಹ್ಮಣತ್ವ, ಜಾತಿ ವ್ಯವಸ್ಥೆಯ ಮೇಲು ಕೀಳು ಭಾವವನ್ನು ಕುರಿತಂತೆ ತೀವ್ರವಾದ ವಿರೋಧವನ್ನು ವ್ಯಕ್ತಪಡಿಸಿದ್ದಾಳೆ. '' ಜಾತಿಗಳೆ ನೀವೇಕೆ ಕೀಳಾದಿರೋ'' ಎಂದು ಪ್ರಶ್ನಿಸುವ ಕಾಳವ್ವ.

---

೩. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೮೬೦
೪. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೭೧೬

ಶಿವಭಕ್ತರು ಹೊತ್ತಾರೆಯೆದ್ದು ಗುರುಲಿಂಗ ಜಂಗಮಕ್ಕೆ ಶರಣೆನ್ನದೆ
ಮುನ್ನ ಬ್ರಾಹ್ಮಣನ ಕಂಡು ಶರಣಾರ್ಥಿ ಎಂದಡೆ
ಎಂಬತ್ನಾಲ್ಕು ಲಕ್ಷ ಯೋನಿಯಲ್ಲಿ ಹಂದಿಯ ಬಸುರಲ್ಲಿ ಬಪ್ಪುದು ತಪ್ಪದು ಕಾಣಾ[೫]

ಎಂದು ಬ್ರಾಹ್ಮಣತ್ವದ ಹಿರಿಮೆಯನ್ನು ಅಲ್ಲಗೆಳೆಯುತ್ತಾಳೆ. ತನ್ನ ಮತ್ತೊಂದು ವಚನದಲ್ಲಿ ಜಾತಿ ವ್ಯವಸ್ಥೆಯ ಸ್ವರೂಪ ನಿರ್ಧಾರದ ಬಗೆಗೆ ಅಸಮಾಧಾನವನ್ನು ವ್ಯಕ್ತಪಡಿಸುತ್ತಾ

ಕುರಿ ಕೋಳಿ ಕರಿಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು.
ಶಿವಗೆ ಪಂಚಾಮೃತವ ಕರೆವ ಪಶುವ ತಿಂಬ ಮಾದಿಗ ಕೀಳಜಾತಿಯೆಂಬರು.
ಅವರೆಂತು ಕೀಳುಜಾತಿಯಾದರು? ಜಾತಿಗಳು ನೀವೇಕೆ ಕೀಳಾಗಿರೊ?[೬]

ಎಂದು ಜಾತಿ ವ್ಯವಸ್ಥೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ರೂಪಿಸಿಕೊಂಡಿರುವುದನ್ನು ವಿರೋಧಿಸುತ್ತಾಳೆ. ಅಂತೆಯೇ ಮುಂದುವರಿದು ''ಬ್ರಾಹ್ಮಣನುಂಡುದು ಪುಲ್ಲಿಗೆ ಶೋಭಿತವಾಗಿ ನಾಯಿ ನೆಕ್ಕಿ ಹೋಯಿತು. ಮಾದಿಗುರುಂಡುದು ಪುಲ್ಲಿಗೆ ಬ್ರಾಹ್ಮಣಗೆ ಶೋಭಿತವಾಯಿತು'' ಎಂದು ಜಾತಿ ವ್ಯವಸ್ಥೆಗೆ ಪ್ರಮುಖ ಕಾರಣವಾದ ಬ್ರಾಹ್ಮಣತ್ವದ ವಿರುದ್ಧ ಅತ್ಯಂತ ತೀವ್ರವಾಗಿ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾಳೆ.

ಕನಿಷ್ಠಕುಲದಲ್ಲಿ ಹುಟ್ಟಿದ ಮತ್ತೊಬ್ಬ ವಚನಕಾರ್ತಿ ಹಡಪದ ಅಪ್ಪಣ್ಣನ ಹೆಂಡತಿ ಲಿಂಗಮ್ಮ. ಹುಟ್ಟಿಗಿಂತ ಬದುಕು ಮುಖ್ಯವೆಂದು ಸಾರುವ ಇವಳು ತನ್ನ ಹುಟ್ಟನ್ನು ಕುರಿತಂತೆ ಯಾವುದೇ ಅಂಜಿಕೆ ಆತಂಕಗಳಿಲ್ಲದೆ ಈ ರೀತಿ ಹೇಳುತ್ತಾಳೆ.

ಕನಿಷ್ಠದಲ್ಲಿ ಹುಟ್ಟಿದೆ, ಉತ್ತಮದಲ್ಲಿ ಬೆಳೆದೆ,
ಸತ್ಯಶರಣರ ಪಾದವಿಡಿದೆ.
ಆ ಶರಣರ ಪಾದವಿಡಿದು ಗುರುವ ಕಂಡೆ, ಲಿಂಗವ ಕಂಡೆ.
ಜಂಗಮವ ಕಂಡೆ, ಪಾದೋದಕವ ಕಂಡೆ, ಪ್ರಸಾದವ ಕಂಡೆ.
ಇಂತಿವರ ಕಂಡೆನ್ನ ಕಂಗಳಮುಂದಣ ಕತ್ತಲೆ ಹರಿಯಿತ್ತು.
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ
ಮಂಗಳದ ಮಹಾಬೆಳಗಿನೊಳಗೋಲಾಡಿ ಸುಖಿಯಾದೆನಯ್ಯಾ[೭]

ಎಂದು ಹುಟ್ಟಿಗಿಂತ ತಾನು ಗಳಿಸಿದ ಸಾಧನೆ ಮುಖ್ಯ ಎಂದು ಸಾರುತ್ತಾಳೆ. ಅಲ್ಲದೆ ಈ ಜಾತಿ ವ್ಯವಸ್ಥೆ ತನ್ನನ್ನು ಯಾವುದೇ ರೀತಿ ಕಾಡದಿರುವ ಬಗ್ಗೆ ಸಮಾಧಾನ ವ್ಯಕ್ತಪಡಿಸುತ್ತಾಳೆ. ಕದಿರೆ ಕಾಯಕದ ರೆಮ್ಮವ್ವೆ ತಾನು ಮಾಡುವ ಕೆಲಸದ ರೂಪಕದ ಮೂಲಕ ''ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ'' ಎಂದು ವೃತ್ತಿಪ್ರಧಾನ ಜಾತಿ ವ್ಯವಸ್ಥೆಯನ್ನು ನಿರಾಕರಿಸುತ್ತಾಳೆ. ಈ ರೀತಿ ವಚನಕಾರ್ತಿಯರು ಜಾತಿ ವ್ಯವಸ್ಥೆ ಮತ್ತು ಪುರೋಹಿತ ಶಾಹಿ ನಿಯಂತ್ರಣದ ಬಗೆಗೆ ಕಟುವಾಗಿ ಮಾತನಾಡುವುದರ ಮೂಲಕ ಅದರ ಅಸ್ತಿತ್ವವನ್ನು ವಿರೋಧಿಸುತ್ತಾರೆ.

---

೫. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕ.ಸಂ.ನಿ. ಪ್ರಕಟಣೆ, ಪ್ರಸ್ತಾವನೆ ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಪುಟ. ೨೩

೬. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೬೫೨

೭. ಶಿವ ಶರಣೆಯರ ವಚನ ಸಂಪುಟ ಭಾಗ ೫ – ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೦೫೨

ಭಕ್ತಿ ಸಾಧನೆಯ ಮೂಲಕ ಕೈಲಾಸಕ್ಕೆ ಏರಬೇಕೆಂಬ ಶರಣರ ಅಭಿಪ್ರಾಯವನ್ನೂ ಕೂಡ ವಚನಕಾರ್ತಿಯರು ಪ್ರಶ್ನಿಸುತ್ತಾರೆ. ಮೋಳಿಗೆ ಮಹಾದೇವಿ ''ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದೆಹೆನೆಂಬುದು ಕೈಕೂಲಿ'' ಎಂದು ಭಕ್ತಿಯನ್ನು ಮಾಡಿ ಕೈಲಾಸಕ್ಕೆ ಹೋಗುವ ತನ್ನ ಪತಿಯ ಆಸೆಯನ್ನು ನಿರಾಕರಿಸುತ್ತಾಳೆ. ಅಲ್ಲದೆ ''ಕಾಯವೇ ಕೈಲಾಸವೆಂದ ಮೇಲೆ ಮತ್ತೆ ಬೇರೆ ಕೈಲಾಸವುಂಟೆ'' ಎಂದು ತನ್ನ ಇರುವಿಕೆಯಲ್ಲಿಯೇ ಕೈಲಾಸವನ್ನು ಕಾಣಬೇಕೆಂಬ ಅಭಿಪ್ರಾಯನ್ನು ವ್ಯಕ್ತಪಡಿಸುತ್ತಾಳೆ. ಮುಕ್ತಾಯಕ್ಕ, ಆಯ್ದಕ್ಕಿ ಲಕ್ಕಮ್ಮ ಮುಂತಾದವರ ವಚನಗಳಲ್ಲಿಯೂ ಇದೇ ರೀತಿಯ ಅಭಿಪ್ರಾಯವನ್ನು ಕಾಣಬಹುದು. ಹಡಪದ ಲಿಂಗಮ್ಮ

**ಕೈಲಾಸ ಮರ್ತ್ಯಲೋಕ ಎಂಬರು**
**ಕೈಲಾಸವೆಂದಡೇನೋ? ಮರ್ತ್ಯಲೋಕವೆಂದಡೇನೋ?**
**ಅಲ್ಲಿಯ ನಡೆಯೂ ಒಂದೆ, ಇಲ್ಲಿಯ ನಡೆಯೂ ಒಂದೆ,**
**ಅಲ್ಲಿಯ ನುಡಿಯೂ ಒಂದೆ ಇಲ್ಲಿಯ ನುಡಿಯೂ ಒಂದೆ ಕಾಣಿರಯ್ಯ**[೮]

ಎಂದು ಕೈಲಾಸ ಮುತ್ತು ಮರ್ತ್ಯಲೋಕ ಎರಡೂ ಬೇರೆ ಬೇರೆ ಎಂಬ ಅಭಿಪ್ರಾಯವನ್ನು ನಿರಾಕರಿಸುತ್ತಾಳೆ. ಇವಳ ಈ ಚಿಂತನಾ ಕ್ರಮ ಬಸವಣ್ಣನ ಚಿಂತನೆಗೆ ಸರಿಸಮಾನವಾದುದ್ದಾಗಿದೆ.

ಹೆಣ್ಣಿಗೆ ಸ್ವಾತಂತ್ರವಿಲ್ಲ ಎನ್ನುವ ಸಂದರ್ಭದಲ್ಲಿ ಈ ವಚನಕಾರ್ತಿಯರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಮುಂದಾದದ್ದೇ ಒಂದು ರೀತಿಯ ಪ್ರತಿಭಟನೆಯಾಗಿದೆ. ಜೊತೆಗೆ ಗಂಡು ಮೇಲು, ಹೆಣ್ಣು ಕೀಳು ಎಂಬ ಬೇಧ ಭಾವವಿಲ್ಲದೆ ''ಸತಿಪತಿಗಳೊಂದಾದ ಭಕ್ತಿ ಹಿತವಪ್ಪದು ಶಿವಂಗೆ'' ಎಂದು ಸಮಾನ ಆಲೋಚನೆ, ಚಿಂತನೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವ ಮೂಲಕ ಸಂಸಾರ ನಡೆಸಿದವರು ವಚನಕಾರರು. ಈ ಅಭಿಪ್ರಾಯವನ್ನು ಸಮರ್ಥಿಸುತ್ತಾ ಗಂಡನ ಎಲ್ಲಾ ಕೆಲಸ ಕಾರ್ಯಗಳಲ್ಲಿ ಸಹಕರಿಸುತ್ತಾ, ತಾವು ಕೀಳಲ್ಲ ಎಂಬ ಮನೋಭಾವದಿಂದ ನಡೆದು ಕೊಂಡವರು ಈ ವಚನಕಾರ್ತಿಯರು. ಇವರ ವಚನಗಳಲ್ಲಿ ಗಂಡು-ಹೆಣ್ಣಿನ ಬಗೆಗೆ ಹೊಸ ರೀತಿ ಆಲೋಚನೆಯನ್ನು ಗುರುತಿಸಬಹುದು. ಗಂಡು-ಹೆಣ್ಣಿನ ಭೇದ ಜೈವಿಕ ರಚನೆಯಿಂದ ಉಂಟಾದದ್ದೇ ವಿನಃ ಆತ್ಮಕ್ಕೆ ಯಾವುದೇ ರೀತಿಯ ಭೇದವಿಲ್ಲ ಎಂಬ ದಾಸಿಮಯ್ಯನ ವಚನವನ್ನು ಸಮರ್ಥಿಸುವ ಗೊಗ್ಗವ್ವ ''ಮೊಲೆ ಮುಡಿ ಬಂದಡೆ ಹೆಣ್ಣೆಂಬರು, ಮೀಸೆ ಕಾಸೆ ಬಂದರೆ ಗಂಡೆಂಬರು ಈ ಉಭಯದ ಜ್ಞಾನ ಹೆಣ್ಣೋ ಗಂಡೋ ನಾಸ್ತಿನಾಥ''ಎಂದು ಪ್ರಶ್ನಿಸುವ ಇವಳು ಅದಕ್ಕೆ ಉತ್ತರವನ್ನು ತನ್ನ ಮತ್ತೊಂದು ವಚನದಲ್ಲಿ ನೀಡಿದ್ದಾಳೆ.

**ಗಂಡು ಮೋಹಿಸಿ ಹೆಣ್ಣ ಹಿಡಿದಡೆ**
**ಅದು ಒಬ್ಬರ ಒಡವೆ ಎಂದು ಅರಿಯಬೇಕು**
**ಹೆಣ್ಣು ಮೋಹಿಸಿ ಗಂಡು ಹಿಡಿದಡೆ**
**ಉತ್ತರವಾವುದೆಂದರಿಯಬೇಕು**
**ಈ ಎರಡರ ಉಭಯವ ಕಳೆದು ಸುಖಿ**
**ತಾನಾಗಬಲ್ಲಡೆ ನಾಸ್ತಿನಾಥನು ಪರಿಪೂರ್ಣನೆಂಬೆ**[೯]

---

೮. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೧೦೪೦

೯. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ಸಂ. ೬೯೩

ಎಂದು ಗಂಡು-ಹೆಣ್ಣು ಮೇಲು, ಕೀಳು ಎಂಬ ಭೇದ ಮರೆತು ಎರಡೂ ಒಂದಾದಾಗ ಮಾತ್ರ ಪರಿಪೂರ್ಣ ಸ್ಥಿತಿ ಸಾಧ್ಯ ಎಂದು ಪ್ರಚಲಿತದಲ್ಲಿದ್ದ ಸಾಮಾಜಿಕ ನಂಬಿಕೆಯನ್ನು ವಿರೋಧಿಸುತ್ತಾಳೆ. ಆಯ್ದಕ್ಕಿ ಲಕ್ಕಮ್ಮ ಕೂಡ ''ಕೂಟಕ್ಕೆ ಸತಿ ಪತಿ ಎಂಬ ನಾಮವಲ್ಲದೆ ಅರಿವಿಂಗ ಬೇರೊಂದೊಡಲುಂಟೆ? ಎಂದು ಪ್ರಶ್ನಿಸುತ್ತಾಳೆ. ಅನುಭಾವ ಆಧ್ಯಾತ್ಮದಲ್ಲಿ ಮಾತ್ರವಲ್ಲದೆ ವೈಚಾರಿಕತೆಯಲ್ಲೂ ಕೂಡ ತಾನು ಗಂಡಿನ ಸಮಾನ ನಿಲ್ಲಬಲ್ಲೆನೆಂಬ ಅಭಿಪ್ರಾಯವನ್ನು ನೀಲಮ್ಮನ ವಚನದಲ್ಲಿ ಕಾಣಬಹುದು. ''ಬಸವನ ಅನುಭವದಿಂದ ವಿವರವ ಕಂಡು ವಿಚಾರಪತ್ನಿಯಾದೆನಯ್ಯಾ'' ಎಂಬ ಅವಳ ಮಾತು ಸ್ತ್ರೀ ಸ್ವಾತಂತ್ರ ಮತ್ತು ಸಮಾನತೆಯ ಮುನ್ನುಡಿ ಎಂದೆನಿಸುತ್ತದೆ. ''ಮಡದಿ ಎನ್ನಲಾಗದ ಬಸವಂಗೆ ಎನ್ನನು, ಪುರುಷನೆನಲಾಗದು ಬಸವನ ಎನಗೆ'' ಎಂದು ಗಂಡ-ಹೆಂಡತಿ ಸಂಬಂಧಕ್ಕ ಮೀರಿದ ವಾತ್ಸಲ್ಯದ ಕಲ್ಪನೆಯುನ್ನು ವ್ಯಕ್ತಪಡಿಸುತ್ತಾಳೆ. ವಚನಕಾರ್ತಿಯರು ಈ ರೀತಿ ಸಾಂಪ್ರದಾಯಿಕ ಗಂಡ-ಹೆಂಡತಿ. ಗಂಡು ಹೆಣ್ಣು ಸಂಬಂಧಗಳಿಗೆ ವ್ಯತಿರಿಕ್ತವಾದ ದಾಂಪತ್ಯದ ಪರಿಕಲ್ಪನೆಯನ್ನು ನೀಡುವುದರ ಮೂಲಕ ಸ್ವಾತಂತ್ರ್ಯ ಮತ್ತು ಸಮಾನತೆಯ ಹೋರಾಟಕ್ಕೆ ಮುಂದಾಗಿದ್ದಾರೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸ್ತ್ರೀಯರ ಅಭಿವ್ಯಕ್ತ ಸ್ವತಂತ್ರಕ್ಕೆ ಪ್ರಬಲ ವಿರೋಧವಿದ್ದ ಸಂದರ್ಭದಲ್ಲಿಯೂ ಕೂಡ ವಚನಕಾರ್ತಿಯರು ಗಂಡನ ಅಸ್ತಿತ್ವ. ಅವನ ಕಾರ್ಯವೈಖರಿಯನ್ನು ಪ್ರಶ್ನಿಸುವ ವಿರೋಧಿಸುವ ಮನೋಭಾವವನ್ನು ವ್ಯಕ್ತಪಡಿಸುತ್ತಾರೆ. ಕದಿರೆ ರೆಮ್ಮವ್ವ ತನ್ನ ಈ ಎರಡು ವಚನಗಳಲ್ಲಿ ಗಂಡನ ಅಸ್ತಿತ್ವದ ಮರು ವ್ಯಾಖ್ಯಾನಕ್ಕೆ ಮುಂದಾಗುತ್ತಾಳೆ. ''ಎನ್ನ ಗಂಡ ಮನದಳ ವಿಭಾಡ, ಎನ್ನ ಗಂಡ ಮನವೇಂಟೆಕಾರ'' ಎನ್ನುವ ಅವಳು ಮುಂದುವರೆದು ''ಎಲ್ಲರ ಗಂಡಂದಿರಿಗೆ ಬೀಜವುಂಟು. ಎನ್ನ ಗಂಡಂಗೆ ಅಂಡದ ಬೀಜವಿಲ್ಲ. ಎಲ್ಲರ ಗಂಡಂದಿರು ಮೇಲೆ, ಎನ್ನಗಂಡ ಕೆಳಗೆ ನಾ ಮೇಲೆ'' ಎಂದು ಮಾರ್ಮಿಕವಾಗಿ ಗಂಡನ ಅಸ್ತಿತ್ವದ ಪರೀಕ್ಷೆಗೆ ಮುಂದಾಗುತ್ತಾಳೆ. ಹೆಣ್ಣುಮಾಯೆ, ಲೌಕಿಕದ ಎಲ್ಲಾ ಆಸೆ, ಪ್ರಲೋಭನೆಗಳಿಗೆ ಅವಳೇ ಮೂಲ ಕಾರಣ ಎಂಬ ಅಭಿಪ್ರಾಯಕ್ಕೆ ವ್ಯತಿರಿಕ್ತವಾಗಿ ಗಂಡನ ಆಸೆಗೆ ಕಡಿವಾಣ ಹಾಕಿದವಳು ಆಯ್ದಕ್ಕಿ ಲಕ್ಕಮ್ಮ. ''ಆಸೆಯೆಂಬುದು ಅರಸಿಗಲ್ಲದೆ ಶಿವಭಕ್ತರಿಗುಂಟೆ?'' ಎಂದು ಪ್ರಶ್ನಿಸಿ ಹೆಚ್ಚು ತಂದ ಧಾನ್ಯವನ್ನು ಹಿಂದಿರುಗಿಸುವ ಧೃಡ ಚಿತ್ತದ ಲಕ್ಕಮ್ಮ ತನ್ನ ಪತಿ ತಪ್ಪುಮಾಡಿದಾಗ ಪ್ರಶ್ನಿಸಿ, ತಪ್ಪನ್ನು ತಿದ್ದುವ ಕಾರ್ಯಕ್ಕೆ ಮುಂದಾಗುತ್ತಾಳೆ. ಮೋಳಿಗೆ ಮಹಾದೇವಿ ಕೂಡ ತನ್ನ ಗಂಡ ಕೈಲಾಸಕ್ಕೆ ಹೋಗಬೇಕೆಂಬ ಆಸೆ ವ್ಯಕ್ತಪಡಿಸಿದಾಗ ಕಾಯವನ್ನೇ ಕೈಲಾಸವಾಗಿಸಿಕೊಳ್ಳಬೇಕೆಂಬ ಅನುಭಾವದ ನುಡಿಯನ್ನಾಡುವುದರ ಮೂಲಕ ಅವನ ಮನಃಪರಿವರ್ತನೆಗೆ ಕಾರಣಳಾಗುತ್ತಾಳೆ. ಅಕ್ಕಮ್ಮ ತನ್ನ ಒಂದು ವಚನದಲ್ಲಿ ಸಾಮಾಜಿಕ ಸಂಬಂಧದ ಸ್ವರೂಪವನ್ನು ಈ ರೀತಿ ಕಟುವಾಗಿ ನಿಂದಿಸುತ್ತಾಳೆ.

**ತಂದೆಯ ಒಂದಾಗಿ ಬಂದ ಸಹೋದರ ಗಂಡೆಲ್ಲ ತಂದೆಯಾದ ಕಾರಣ**
**ಆ ತಂದೆಯ ಒಡಹುಟ್ಟಿದ ಹೆಣ್ಣೆಲ್ಲ ತನಗೆ ತಾಯಲ್ಲವೆ?**
**ಆಕೆಯನತ್ತೆಯೆಂಬ ಜಗದ ತೆತ್ತುಮತ್ತರ ನಾವರಿಯವಯ್ಯಾ.**
**ಮತ್ತೆ, ತಾವು ಬಳಸುವುದಕ್ಕೆ ಗೊತ್ತಿಲ್ಲವೆಂದಾಕೆಯ ಮಗಳನು**
**ಸತಿಯನೆ ಮಾಡಿಕೊಳ್ಳಬಹುದೆ ?** ೧೦

ಎಂದು ವೈವಾಹಿಕ ಸಂಬಂಧದ ಜೊತೆಗೆ ಕೌಟುಂಬಿಕ ಸಂಬಂಧದ ಸ್ವರೂಪವನ್ನು ವಿಮರ್ಶೆಗೆ ಒಳಪಡಿಸುತ್ತಾಳೆ. ಒಟ್ಟಾರೆ ಈ ಎಲ್ಲಾ ವಚನಕಾರ್ತಿಯರ ಚಿಂತನ ಮತ್ತು ಸಾಧನೆಯನ್ನು ಗಮನಿಸಿದಾಗ ಪ್ರತಿಯೊಬ್ಬರಲ್ಲಿಯೂ ತಮ್ಮದೇ ಆದ ರೀತಿಯ ಪ್ರತಿಭಟನೆಯ ಎಳೆಯನ್ನು ಗುರುತಿಸಬಹುದು. ಅಕ್ಕಮ್ಮ, ಅಮುಗೆ ರಾಯಮ್ಮ, ರೆಮ್ಮಮ್ಮ, ಲಿಂಗಮ್ಮ, ಕಾಳವ್ವೆ

---

೧೦. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ. ವಚನ ಸಂ. ೮೦೯

ಮುಂತಾದವರು. ಅಂದಿನ ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಯನ್ನು ವಿರೋಧಿಸುವ, ವಿಮರ್ಶಿಸುವ ಟೀಕಿಸುವ ಮೂಲಕ ಪ್ರತಿಭಟನೆಯನ್ನು ವ್ಯಕ್ತಪಡಿಸಿದರೆ. ಗಜೇಶ ಮಸಣಯ್ಯಗಳ ಪುಣ್ಯಶ್ರೀ ಉರಿಲಿಂಗ ಪೆದ್ದಿಗಳ ಕಾಳವ್ವೆ, ರೆಮ್ಮವ್ವೆ, ಮೋಳಿಗೆ ಮಹಾದೇವಿ ಮುಂತಾದವರು ಸಮಾಜದ ಭಾಗವಾದ ಭಕ್ತಿ, ಗುರು, ಲಿಂಗ, ಜಂಗಮ, ಜಾತಿ, ವ್ಯವಸ್ಥೆ ಮುಂತಾದ ಪರಿಕಲ್ಪನೆಗಳನ್ನು ಮುರಿದು ಕಟ್ಟುವ ಮೂಲಕ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ಸಾರುತ್ತಾರೆ. ಈ ವಚನಾಕಾರ್ತಿಯರು ಪುರುಷರಿಗೆ ಸಮಾನವಾಗಿ ಚರ್ಚಿಸುವ, ಚಿಂತಿಸುವ, ಆಲೋಚಿಸುವ ಮನೋಭಾವವನ್ನು ವ್ಯಕ್ತಪಡಿಸಿದ್ದು ಕೂಡ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಸಾರಿದ ಪ್ರತಿಭಟನೆಯಾಗಿದೆ. ವಚನಾಕಾರ್ತಿಯರ ಜೀವನ ಮತ್ತು ಸಾಧನೆಯನ್ನು ಗಮನಿಸಿದಾಗ ಸಾಮಾಜಿಕ ವ್ಯವಸ್ಥೆ ಅದರ ರೀತಿ ನೀತಿಯ ವಿರುದ್ಧ ಆಕ್ರೋಶ ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಇದೂ ಕೂಡ ಪ್ರತಿಭಟನೆಯ ಒಂದು ಮಾದರಿಯಾಗಿದೆ.

ಅಕ್ಕನಂತೆ ಲೌಕಿಕ ಸಂಸಾರ ಬಂಧನದಿಂದ ಹೊರನಡೆದವರು ಬೊಂತಾದೇವಿ ಮತ್ತು ಗೊಗ್ಗವ್ವೆ. ಅಕ್ಕ ಲೌಕಿಕ ಸಂಸಾರವನ್ನು ವಿರೋಧಿಸಿದರೆ ಗೊಗ್ಗವ್ವೆ ತನ್ನನ್ನು ವಿವಾಹವಾಗಲು ಬಂದು ಮಾರು ವೇಶದ ಶಿವನನ್ನು ನಿರಾಕರಿಸಿ ಕಾಯಕದ ಶ್ರೇಷ್ಠತೆಯನ್ನು ಸಾರುವ ಮೂಲಕ ಸಂಸಾರದ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸುತ್ತಾಳೆ. ಬೊಂತಾದೇವಿ ಲೌಕಿಕ ಮತ್ತು ಪಾರಮಾರ್ಥಿಕ ಸಂಸಾರಗಳೆರಡನ್ನೂ ಸಹ ನಿರಾಕರಿಸಿದವಳು. ತನ್ನನ್ನು ವರಿಸಲು ಬಂದ ಕಪಟ ವೇಶದಾರಿಯಾದ ಶಿವನ ನಿಜರೂಪವನ್ನು ಅರಿತು ''ಕಾಮ ವೈರಿಯಾದ ನಿನ್ನನ್ನು ಹೇಗೆ ಮದುವೆಯಾಗುವುದು?'' ''ನಿನಗೆ ಇಬ್ಬರು ಹೆಂಡಿರು ಮೂವರು ಮಕ್ಕಳಿದ್ದಾರೆ. ನಿನ್ನೊಡನೆ ಮದುವೆಯಾಗುವುದು ಸರಿಯೆ?'' ಎಂದು ಪ್ರಶ್ನಿಸುವ ಮೂಲಕ ಶಿವನೊಂದಿಗಿನ ವಿವಾಹವನ್ನೂ ಕೂಡ ನಿರಾಕರಿಸುತ್ತಾಳೆ. ಒಟ್ಟಾರೆ ಇವರ ವಿವಾಹ ನಿರಾಕರಣ ಕ್ರಮ ಸ್ವತಂತ್ರಾ ಪೇಕ್ಷೆಯ ಸ್ವಂತಿಕೆಯ ಮನೋಭಾವವನ್ನು ವ್ಯಕ್ತಪಡಿಸುವುದರ ಜೊತೆಗೆ ಸಾಮಾಜಿಕ ಸಿದ್ಧ ಮೌಲ್ಯದ ವಿರುದ್ಧ ಸಾರಿದ ಪ್ರತಿಭಟನೆಯ ಒಂದು ಮಾದರಿಯನ್ನು ಪರಿಚಯಿಸುತ್ತದೆ.

ವಚನಾರ್ತಿಯರಲ್ಲಿ ಕಂಡು ಬರುವ ನೇರವಾದ ಪ್ರತಿಭಟನೆಯ ಮಾದರಿ ಎಂದರೆ ಗಂಡಿಗೆ ಸಮಾನವಾಗಿ ನಿಂತು ಚರ್ಚಿಸುವ, ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅವರ ತಪ್ಪನ್ನು ತಿದ್ದುವ ಕ್ರಮ ಅಲ್ಲಮನಂತಹ ಮಹಾಜ್ಞಾನಿಯೊಡನೆ ಮುಕ್ತ ಚರ್ಚೆ ಹಾಗೂ ಸಂಭಾಷಣೆಗಳಿಗೆ ತೊಡಗಿದವರು ಮುಕ್ತಾಯಕ್ಕಾ ಮತ್ತು ಅಕ್ಕಮಹಾದೇವಿ ಇವರು ಅಲ್ಲಮನಿಗೆ ಸಮಾನವಾದ ಜ್ಞಾನ ಮತ್ತು ಚಿಂತನೆಯನ್ನು ಅಭಿವ್ಯಕ್ತಪಟಿಸುವುದರ ಮೂಲಕ ಅವನಿಂದಲೇ ಮೆಚ್ಚುಗೆ ಪಡೆಯುತ್ತಾರೆ. ಆಯ್ದಕ್ಕಿ ಲಕ್ಕಮ್ಮ ಮತ್ತು ಮೋಳಿಗೆ ಮಹಾದೇವಿ ತಮ್ಮ ಗಂಡಂದಿರು ಮಾಡಿದ ತಪ್ಪನ್ನು ತಿದ್ದುವ ಮೂಲಕ ಸ್ವಂತಿಕೆಯನ್ನು ಮೆರೆದಿದ್ದಾರೆ. ಆಯ್ದಕ್ಕಿಲಕ್ಕಮ್ಮನಂತು'' ಒಮ್ಮನವ ಮೀರಿ ಇಮ್ಮನದಲ್ಲಿ ತಂದಿರಿ ಇದು ನಿಮ್ಮ ಮನವೋ ಬಸವಣ್ಣನ ಅನುಮಾನ ಚಿತ್ತವೊ'' ಎಂದು ಬಸವಣ್ಣನ ಅನುಮಾನವನ್ನು ಕೂಡ ಸವಾಲಾಗಿ ಸ್ವೀಕರಿಸಲು ಮುಂದಾಗುತ್ತಾಳೆ. ಈ ರೀತಿ ಪ್ರತಿಯೊಬ್ಬ ವಚನಕಾರ್ತಿಯರೂ ಕೂಡ ಸಾಮಾಜಿಕ ವ್ಯವಸ್ಥೆ ಅದರ ಆಗು ಹೋಗುಗಳನ್ನು ಕುರಿತಂತೆ ವಚನ ರಚನೆಯ ಮೂಲಕ ತಮ್ಮದೇ ಆದ ರೀತಿಯಲ್ಲಿ ಪ್ರತಿಭಟನೆಯನ್ನು ವ್ಯಕ್ತಪಡಿಸಿದ್ದಾರೆ. ವಿಶೇಷವೆಂದರೆ ಸಾಮಾಜಿಕ ವ್ಯವಸ್ಥೆಯ ಬಗೆಗಾಗಲೀ ಲೌಕಿಕದ ಆಗುಹೋಗುಗಳ ಬಗೆಗಾಗಲೀ ಯಾವುದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸದ ಗಂಗಾಂಬಿಕೆ ವಚನಗಳ ಅಂಕಿತಕ್ಕೆ ''ಗಂಗಾಪ್ರಿಯ ಕೂಡಲಸಂಗಮದೇವ'' ಎಂದು ತನ್ನ ಹೆಸರನ್ನೇ ಬಳಸುವುದರ ಮೂಲಕ ಸ್ವಂತಿಕೆಯ ಜೊತೆಗೆ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯನ್ನು ಸಾರಿದ್ದಾಳೆ ಎಂದರೆ ತಪ್ಪಾಗಲಾರದು.

# ೫
# ಸಂತ ಮಹಿಳೆಯರು ಮತ್ತು ಪ್ರತಿಭಟನೆ

- ಸಮಾಜ, ಆರ್ಥಿಕ, ಆಧ್ಯಾತ್ಮ ಕ್ಷೇತ್ರಗಳಲ್ಲಿ ಹೆಣ್ಣಿನ ಸ್ಥಾನ.
- ಸಂತ ಮಹಿಳೆಯರ ಹುಟ್ಟಿನ ಹಿನ್ನೆಲೆ ಮತ್ತು ಜೀವನ.
- ಸಂತ ಮಹಿಳೆಯರ ಸಾಹಿತ್ಯ.
- ಸಂತ ಮಹಿಳೆಯರ ಆಧ್ಯಾತ್ಮಿಕ ಹೋರಾಟದ ಮಾದರಿ
- ಭಿನ್ನತೆ ಮತ್ತು ವಿಶೇಷತೆ.

ಸ್ತ್ರೀ ಸ್ವಾತಂತ್ರಕ್ಕೆ ಅನರ್ಹಳು. ಬಾಲ್ಯದಲ್ಲಿ ತಂದೆಯ, ಯೌವನದಲ್ಲಿ ಗಂಡನ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿ ಇರಬೇಕು. ಅವಳಿಗೆ ಯಾವುದೇ ರೀತಿಯ ಸಾಮಾಜಿಕ, ಧಾರ್ಮಿಕ, ಆರ್ಥಿಕ ಸ್ವಾತಂತ್ರ್ಯವಿಲ್ಲ ಎಂಬ ಮನೋಭಾವ ಪ್ರಬಲವಾಗಿ ಬೇರೂರಿದ್ದ ಸಂದರ್ಭದಲ್ಲಿ ಭಾರತವೂ ಸೇರಿದಂತೆ ವಿಶ್ವದಾದ್ಯಂತ ವೈಯಕ್ತಿಕವಾಗಿ ಹೆಣ್ಣು ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಪ್ರಯತ್ನಗಳು ನಡೆದವು. ಯಶಸ್ವಿ ಕೂಡ ಆದವು. ಇವರಲ್ಲಿ ಪ್ರಮುಖವಾಗಿ ಗುರುತಿಸಲ್ಪಟ್ಟವರೆಂದರೆ ಬಾಗ್ದಾದಿನ ಸೂಫಿ ಸಂತ ಮಹಿಳೆ ರಾಬಿಯಾ ಬಸ್ರಿ. ಕಾಶ್ಮೀರದ ಶೈವ ಸಂತ ಮಹಿಳೆ ಲಲ್ಲೇಶ್ವರಿ, ರಾಜಸ್ಥಾನದ ಮೀರಾಬಾಯಿ, ಮಹಾರಾಷ್ಟ್ರದ ಬಹಿನಾ ಬಾಯಿ, ತಮಿಳುನಾಡಿನ ಆಂಡಾಳ್, ಕಾರಿಕಾಲಮ್ಮೆ ಮುಂತಾದವರು. ಅದೇ ರೀತಿ ಕರ್ನಾಟಕದಲ್ಲಿ ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯ ಪರವಾಗಿ ಬಹುದೊಡ್ಡ ದನಿಯಾದವಳು, ಹೋರಾಟದ ಸೆಲೆಯಾದವಳು ಅಕ್ಕಮಹಾದೇವಿ.

ಈ ಸಂತ ಮಹಿಳೆಯರ ಜೀವನ ಹಾಗೂ ಸಾಧನೆಗೆ ಸಂಬಂಧಿಸಿದಂತೆ ಹಲವು ಅಂಶಗಳಲ್ಲಿ ಸಾಮ್ಯತೆಯನ್ನು ಗುರುತಿಸಬಹುದು. ಕಾಲ ದೇಶದ ದೃಷ್ಟಿಯಿಂದ ಇವರು ಬೇರೆ ಬೇರೆಯಾದರೂ ಕೂಡ ಆಧ್ಯಾತ್ಮ ಸಾಧನೆಗೆ ಇವರು ಕ್ರಮಿಸಿದ ಮಾರ್ಗ ಬಹುತೇಕ ಒಂದೇ ರೀತಿಯದ್ದಾಗಿದೆ. ಅಲ್ಲದೆ ಇವರ ಹುಟ್ಟು ಹಾಗೂ ಬಾಲ್ಯಕ್ಕೆ ಸಂಬಂಧಿಸಿದ ಪೌರಾಣಿಕ ನಂಬಿಕೆಗಳು, ಆಧ್ಯಾತ್ಮ ಸಾಧನೆಯ ಹಾದಿ, ದೇವರನ್ನು ಕಾಣುವ ಹಂಬಲ, ಉತ್ಕಟತೆ ಪ್ರೀತಿಗೆ ಸಂಬಂಧಿಸಿದ ಅಂಶಗಳಲ್ಲೂ ಕೂಡ ಈ ಸಾಮ್ಯತೆಯನ್ನು ಗುರುತಿಸಬಹುದು. ಆದರೆ ಎಲ್ಲಕ್ಕಿಂತ ಮುಖ್ಯವಾಗಿ ಇವರು ಕಂಡುಕೊಂಡ ಸತ್ಯ ಹಾಗೂ ಅದಕ್ಕೆ ಬಳಸಿದ ಮಾಧ್ಯಮ ಅಧ್ಯಯನದ ದೃಷ್ಟಿಯಿಂದ ಮಹತ್ವವಾದದ್ದು, ಅಲ್ಲದೆ ಅಕ್ಕ ಇವರೆಲ್ಲರಿಗಿಂತ ಹೋರಾಟ ಹಾಗೂ ಸಾಧನೆಯಲ್ಲಿ ಭಿನ್ನವಾದ ಬಗೆ ಹೇಗೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ.

## ಸಮಾಜ, ಆರ್ಥಿಕ, ಆಧ್ಯಾತ್ಮ ಕ್ಷೇತ್ರದಲ್ಲಿ ಹೆಣ್ಣಿನ ಸ್ಥಾನ

ಹಿಂದಿನಿಂದಲೂ ಹೆಣ್ಣಿನ ದೈಹಿಕ ರಚನೆಯೇ ಕಾರಣವಾಗಿ ಅವಳನ್ನು ಗಂಡಿಗಿಂತ ಎಲ್ಲಾ ವಿಷಯಗಳಲ್ಲೂ ಕೀಳು ಎಂದು ಭಾವಿಸಲಾಗಿತ್ತು. ವೇದ ಆಗಮಗಳಲ್ಲಿ ಸ್ತ್ರೀಯರು ಧಾರ್ಮಿಕ ವಿಧಿವಿಧಾನಗಳಲ್ಲಿ ಗಂಡಿಗೆ ಸರಿಸಮಾನವಾಗಿ ಭಾಗವಹಿಸುತ್ತಿದ್ದರು ಎಂಬ ಉಲ್ಲೇಖಗಳಿದ್ದರೂ ಕೂಡ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅವರು ಗಂಡಿಗೆ ಸಮಾನವಾದ ಸ್ಥಾನ ಪಡೆದಿದ್ದರು ಎಂಬ ಬಗ್ಗೆ ಉಲ್ಲೇಖಗಳಿಲ್ಲ. ಬೌದ್ಧ ಮತ್ತು ಜೈನ ಧರ್ಮಗಳು ಅಸ್ತಿತ್ವಕ್ಕೆ ಬಂದ ಸಂದರ್ಭದಲ್ಲಿಯೂ ಹೆಣ್ಣು ಆಧ್ಯಾತ್ಮ ಹಂತದಲ್ಲಿ ಸರಿಸಮಾನ ಸ್ಥಾನವನ್ನು ಹೊಂದಿದ್ದಳು ಎಂಬುದು ಇತಿಹಾಸದಿಂದ ತಿಳಿದುಬರುತ್ತವೆ. ಆದರೆ ನಂತರ ಉಂಟಾದ ರಾಜಕೀಯ, ಸಾಮಾಜಿಕ ತಲ್ಲಣಗಳು ಹೆಣ್ಣಿನ ಅಸ್ತಿತ್ವ ಸಂಪೂರ್ಣ ಕುಸಿಯಲು ಕಾರಣವಾಯಿತು.

ಸಾಮಾಜಿಕವಾಗಿ ಹೆಣ್ಣಿಗೆ ಹಿಂದಿನಿಂದಲೂ ವಿಶೇಷವಾದ ಮಾನ್ಯತೆ ಇತ್ತಾದರೂ ಅದು ಕೇವಲ ತಾಯಿಯಾಗಿ, ಹೆಂಡತಿಯಾಗಿ, ಮಗಳಾಗಿ, ಗಂಡಿಗೆ ಸಹಕರಿಸುವ, ಅವನ ಬೇಕು ಬೇಡಗಳನ್ನು ಅರಿಯುವ, ಇಚ್ಛಾಶಕ್ತಿಗೆ ಇಂಬು ನೀಡುವ, ಜೀವಂತ ವಸ್ತುವಿನ ರೀತಿ ಮಾತ್ರ. ಭಾರತವೂ ಸೇರಿದಂತೆ ವಿಶ್ವದಾದ್ಯಂತ ಎಲ್ಲಾ ಧರ್ಮಗಳೂ ಕೂಡ ಹೆಣ್ಣಿಗೆ ಸ್ವತಂತ್ರ ಅಸ್ತಿತ್ವವಿಲ್ಲ ಎನ್ನುವ ಅಂಶವನ್ನೇ ಪ್ರತಿಪಾದಿಸುತ್ತಾ ಬಂದಿವೆ. ಇರಾನ್‌ನ ಜೊರಾಸ್ಟರ್ ಧರ್ಮ "ನಿಮ್ಮ ಹೆಂಗಸರಲ್ಲಿ ನಂಬಿಕೆ ಇಡಬೇಡಿ. ಇಟ್ಟರೆ ನೀವು ನಾಚಿಕೊಳ್ಳುವ, ಪಶ್ಚಾತ್ತಾಪ ಪಡುವ ಸಂದರ್ಭ ಬಂದೀತು"[೧] ಎಂದರೆ, ಯಹೂದಿಗಳು "ಓ ದೇವರೇ ನೀನು ನನ್ನನ್ನು ಹೆಣ್ಣಾಗಿ ಮಾಡಲಿಲ್ಲವಾದ್ದರಿಂದ ನಾನು ಧನ್ಯನಾದೆ"[೨] ಎನ್ನುತ್ತಾರೆ.

ಇವರ ಪ್ರಕಾರ ಹೆಣ್ಣು ಗಂಡಿನ ಸಾಧನೆಗೆ, ಅವನ ವ್ಯಕ್ತಿತ್ವಕ್ಕೆ ಕುಂದನ್ನುಂಟು ಮಾಡುವ ಸಾಧನ. ಆದುದರಿಂದ ಹೆಣ್ಣಿಗೆ ಸ್ವತಂತ್ರ ಅಸ್ತಿತ್ವವಿಲ್ಲ. ಅವಳು ದೈಹಿಕವಾಗಿ, ಮಾನಸಿಕವಾಗಿ, ಯಾವುದೇ ಸಾಮರ್ಥ್ಯವನ್ನೂ ಹೊಂದಿಲ್ಲ ಎಂದು ಧರ್ಮದ ಆಶ್ರಿದ ಪುರುಷ ಪ್ರಧಾನ ವ್ಯವಸ್ಥೆಗಳು ಸಾರಿದವು. ಪ್ರಸಿದ್ಧ ತತ್ವಜ್ಞಾನಿ ಮಾರ್ಟಿನ್ ಲೂಥರ್ ಸಹ ಹೆಣ್ಣಿನ ಬಗೆಗೆ ಇದೇ ರೀತಿಯ ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತಾನೆ. ಅವನ ಪ್ರಕಾರ, "ಸ್ತ್ರೀಯು ಬುದ್ಧಿವಂತಳಾಗುವುದಕ್ಕೆ ಬಯಸುವುದೇ ಅಪರಾಧ"[೩]. ಈ ರೀತಿ ಮನೋಭಾವ ಮತ್ತು ಧೋರಣೆ ಯಾವ ಸ್ವರೂಪದ್ದು ಎಂದು ತಿಳಿಯುತ್ತದೆ.

ಮತ್ತೊಂದು ಹಂತದಲ್ಲಿ ಹೆಣ್ಣಿಗೆ ನೀಡಲಾದ ತಾಯಿ, ದೇವತೆ ಮುಂತಾದ ಬಿರುದುಗಳೇ ಅವಳ ಜೀವನದ ದುಸ್ಥಿತಿಗೆ ಕಾರಣವಾಯಿತು. ಪಾತಿವ್ರತ್ಯ, ಮಾತೃತ್ವದ ಹೆಸರಿನಲ್ಲಿ ಹೆಣ್ಣಿನ ಮೇಲೆ ಅನೇಕ ಸಾಮಾಜಿಕ ಕಟ್ಟಳೆಗಳನ್ನು ಹೇರಲಾಯಿತು. ಜೊತೆಗೆ ಮಹಾಕಾವ್ಯಗಳಲ್ಲಿ ಚಿತ್ರಿತವಾಗಿರುವ ಸ್ತ್ರೀ ಪಾತ್ರಗಳ ಆದರ್ಶೀಕರಣ ಹೆಣ್ಣಿನ ವ್ಯಕ್ತಿತ್ವದ ಸಮಗ್ರತೆಯನ್ನು ಸಂಕುಚಿತಗೊಳಿಸಿತು. ಅಲ್ಲದೆ ಹೆಣ್ಣನ್ನು ತ್ಯಾಗ, ಕರುಣೆ, ಮಮತೆ, ಅನುಕಂಪಗಳ ಸಾಕಾರ ಮೂರ್ತಿ ಎಂದು ವರ್ಣಿಸುವುದರ ಮೂಲಕ ಅವಳ ಸ್ವಾತಂತ್ರಹರಣ ಮಾಡಲಾಯಿತು. ಈ ರೀತಿ ಸಾಮಾಜಿಕವಾಗಿ ಹೆಣ್ಣಿಗೆ ನೀಡಿದ ಅತಿ ಶ್ರೇಷ್ಠಳೆಂಬ ಹೆಗ್ಗಳಿಕೆಯೇ ಅವಳ ಎಲ್ಲಾ ನೋವು, ಹಿಂಸೆಗೆ ಕಾರಣವಾಯಿತಲ್ಲದೆ ಕೇವಲ ಕುಟುಂಬ ನಿರ್ವಹಣೆಯ ಸಾಧನವಾಗಿ ಮಾರ್ಪಟ್ಟಳು.

ಆರ್ಥಿಕವಾಗಿ ಸ್ತ್ರೀಯರಿಗೆ ಸ್ವಲ್ಪ ಮಟ್ಟಿನ ಸ್ವಾತಂತ್ರ ದೊರೆತದ್ದು 12ನೇ ಶತಮಾನದಲ್ಲಿ, ವಚನಕಾರರು ಪ್ರತಿಪಾದಿಸಿದ

---

೧. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪುಟ - ೬

೨. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪುಟ - ೬

೩. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪುಟ - ೬

ಕಾಯಕ ತತ್ವ ಅವರಲ್ಲಿ ದುಡಿಮೆಯ ಮಹತ್ವವನ್ನು ಬಿತ್ತಿತು. ಆದುವರೆಗೂ ಹೆಣ್ಣು ಕೇವಲ ಗೃಹಕೃತ್ಯಗಳಿಗೆ, ಗಂಡ ಮಕ್ಕಳ ಪೋಷಣೆಗೆ ಮಾತ್ರ ಸಮರ್ಥಳು ಎಂಬ ಸಿದ್ಧಾಂತವನ್ನು ನಿರಾಕರಿಸುವುದರ ಮೂಲಕ ಅವಳೂ ಕೂಡ ಹೊರಗಿನ ಕೆಲಸಗಳಲ್ಲಿ ಭಾಗವಹಿಸಬಹುದು ಎಂಬುದನ್ನು ತಿಳಿಸದರು. ಆದರೆ ಈ ಹಂತದಲ್ಲಿಯೂ ಕೂಡ ಅವರ ದುಡಿಮೆ ಗಂಡಿನ ಆಸೆ ಆಕಾಂಕ್ಷೆಗಳಿಗೆ ಪೂರಕವಾಗಿದ್ದೀತೇ ವಿನಃ ಅವಳ ಇಚ್ಛಾಶಕ್ತಿಗೆ ಒಳಪಟ್ಟರಲಿಲ್ಲ ಎಂಬುದು ಗಮನಾರ್ಹ ಸಂಗತಿ. 12ನೇ ಶತಮಾನದ ಹಿ,ದಿನ ಮತ್ತು ನಂತರದ ಕಾಲದಲ್ಲಿ ಸ್ತ್ರೀಯರು ಕೇವಲ ಗೃಹ ನಿರ್ವಹಣೆಯಲ್ಲಿ ಮಾತ್ರ ಭಾಗವಹಿಸುತ್ತಿದ್ದರಿಂದ ಅಲ್ಲಿ ಆರ್ಥಿಕ ಸ್ವಾತಂತ್ರ್ಯದ ಪ್ರಶ್ನೆಯೇ ಬರುವುದಿಲ್ಲ.

ಹೆಣ್ಣಿಗೆ ಸ್ವಲ್ಪಮಟ್ಟಿಗೆ ಸ್ವಾತಂತ್ರವಿದುದ್ದು ಆಧ್ಯಾತ್ಮ ಕ್ಷೇತ್ರದಲ್ಲಿ ಮಾತ್ರ. ಗಂಡಿಗೆ ಸರಿಸಮಾನವಾಗಿ ತನ್ನನ್ನು ಗುರುತಿಸಿಕೊಳ್ಳಲು ಸಾಮರ್ಥ್ಯವಿದ್ದದ್ದೂ ಕೂಡ ಇಲ್ಲಿಯೇ. ಆದುದರಿಂದ ವಿಶ್ವದಾದ್ಯಂತ ಪ್ರಾರಂಭವಾದ ಮಹಿಳಾ ಹೋರಾಟಗಳು ಈ ಹಂತದಿಂದಲೇ ಪ್ರಾರಂಭವಾದವು. ಇವರುಗಳು ಆಧ್ಯಾತ್ಮ ಸಾಧನೆಯನ್ನು ತಮ್ಮ ಗುರಿಯಾಗಿಸಿಕೊಳ್ಳುವುದರ ಮೂಲಕ ಸಾಮಾಜಿಕ, ಆರ್ಥಿಕ ಸ್ವಾತಂತ್ರ್ಯದತ್ತ ಮುಖ ಮಾಡಿದರು. ಕುಟುಂಬ, ಸಂಸಾರ, ಮದುವೆ, ಗಂಡ, ಮಕ್ಕಳು ಈ ಅಂಶಗಳು ಹೆಣ್ಣಿನ ಅಸ್ತಿತ್ವ ನಿರ್ಧಾರ ಮತ್ತು ನಿರ್ಬಂಧ ಹೇರುತ್ತಿದ್ದ ಸಂದರ್ಭದಲ್ಲಿ ಮಹಿಳೆಯರು ಈ ವ್ಯವಸ್ಥೆಯನ್ನು ವಿರೋಧಿಸಲು ಆಯ್ದುಕೊಂಡ ಸಮರ್ಥ ಮಾಧ್ಯಮ ಆಧ್ಯಾತ್ಮ ಸಾಧನೆ. ದೇವರನ್ನು ಕಾಣುವ, ಕೂಡುವ ಹಂಬಲದೊಂದಿಗೆ ಲೌಕಿಕ ಸಂಸಾರ ಮತ್ತು ಅದರ ನಿರ್ಬಂಧಗಳನ್ನು ಧಿಕ್ಕರಿಸುತ್ತಾರೆ ಈ ಮಹಿಳಾ ಅನುಭಾವಿಗಳು. ಹೆಣ್ಣಿನ ಜೀವನದ ಪ್ರತಿಯೊಂದು ಘಟನೆಯೂ ಗಂಡಿನಿಂದ ನಿರ್ಧರಿಸಲ್ಪಡುತ್ತಿದ್ದ ಸಂದರ್ಭದಲ್ಲಿ ತಮ್ಮ ಬಾಳಸಂಗಾತಿಯನ್ನು ತಾವೇ ಆರಿಸಿಕೊಳ್ಳುವ ಸ್ವತಂತ್ರ ಮನೋಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಕುಟುಂಬ ಸಮಾಜದ ಅತಿ ಪ್ರಮುಖ ಘಟಕವಾಗಿದ್ದ ಸಂದರ್ಭದಲ್ಲಿ ಅದರ ನಿರಾಕರಣೆಯ ಮೂಲಕ ಇವರು ಸಮಾಜ, ಸಂಸ್ಕೃತಿಯ ವಿರುದ್ಧ ದನಿ ಎತ್ತಿದರು. ಆದುದರಿಂದ ಇವರ ಹೋರಾಟ ಕೇವಲ ಆಧ್ಯಾತ್ಮಿಕ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರದೆ ಅದು ಬಹುದೊಡ್ಡ ಪ್ರಮಾಣದಲ್ಲಿ ಸಾಮಾಜಿಕ ಪರಿಧಿಯನ್ನು ವ್ಯಾಪಿಸಿರುವುದು ಗಮನಾರ್ಹ ಸಂಗತಿ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿತವಾಗಿರುವ ಮಹಿಳಾ ಅನುಭಾವಿಗಳ ಪ್ರತಿಭಟನೆ ಆಧ್ಯಾತ್ಮದ ಜೊತೆ ಜೊತೆಯಲ್ಲಿಯೇ ಸಾಮಾಜಿಕ ವ್ಯಾಪ್ತಿಯನ್ನೂ ಕೂಡ ಪಡೆದುಕೊಂಡಿದೆ.

## ಸಂತ ಮಹಿಳೆಯರ ಹುಟ್ಟಿನ ಹಿನ್ನೆಲೆ ಮತ್ತು ಜೀವನ

ಹೆಣ್ಣು ಸಂಪೂರ್ಣ ಅವಗಣನೆಗೆ ಒಳಗಾಗಿದ್ದ ಸಂದರ್ಭದಲ್ಲಿ ವಿಶ್ವದಾದ್ಯಂತ ಅಲ್ಲೊಬ್ಬ ಇಲ್ಲೊಬ್ಬ ಸ್ತ್ರೀಯರು ವೈಯಕ್ತಿಕವಾಗಿ ತಮ್ಮದೇ ರೀತಿಯಲ್ಲಿ ಹೋರಾಟವನು ಪ್ರಾರಂಭಿಸಿದರು. ಈ ಹೋರಾಟ ಸಾಮಾಜಿಕ ಸ್ವರೂಪದ್ದಾಗಿರದೆ ತಮ್ಮ ಬದುಕಿಗಾಗಿ ನಡೆಸಿದ ಹೋರಾಟವಾಗಿತ್ತು. ಇವರ ಕಾಲ, ದೇಶ ಹಾಗೂ ಚಿಂತನೆ ವಿಭಿನ್ನವಾದರೂ ಕೂಡ ಅದಕ್ಕೆ ಬಳಸಿಕೊಂಡ ಮಾಧ್ಯಮ ಮಾತ್ರ ಒಂದೇ. ಅದೆಂದರೆ ಆಧ್ಯಾತ್ಮ ಸಾಧನೆಯ ಹಾದಿ. ಹೆಣ್ಣು ಯಾವುದೇ ರೀತಿಯ ಸ್ವಾತಂತ್ರವನ್ನು ಪಡೆಯಲು ಅರ್ಹಳಲ್ಲ ಎಂಬ ಸಂದರ್ಭದಲ್ಲಿ ಈ ಮಹಿಳೆಯರು ದೇವರನ್ನು ಪ್ರಿಯಕರನನ್ನಾಗಿ ಭಾವಿಸುವುದು, ಒಲಿಸಿಕೊಳ್ಳಲು ಪ್ರಯತ್ನಿಸುವುದು ಮತ್ತು ಒಂದಾಗುವ ಭಾವದ ಮೂಲಕ ಪುರುಷ ಪ್ರಧಾನ ವ್ಯವಸ್ಥೆ ಮತ್ತು ಸಾಮಾಜಿಕ ಸಂಕೋಲೆಗಳ ವಿರುದ್ಧ ದನಿ ಎತ್ತಿದರು. ಆ ದೃಷ್ಟಿಯಿಂದ ಈ ಮಹಿಳಾ ಅನುಭಾವಿಗಳ ಹೋರಾಟ ವೈಯಕ್ತಿಕವಾದರೂ ಕೂಡ ಅತ್ಯಂತ ಯಶಸ್ವಿಯಾಗಿ ಸಾಮಾಜಿಕ ಬದಲಾವಣೆಗೆ ನಾಂದಿಯಾಯಿತು.

ಈ ಸಂತ ಮಹಿಳೆಯರ ಹುಟ್ಟಿನ ಹಿನ್ನೆಲೆ ಮತ್ತು ಜೀವನವನ್ನು ಅಧ್ಯಯನ ಮಾಡ ಹೊರಟಾಗ ತಿಳಿಯುವ ಸಾಮಾನ್ಯ ಸಂಗತಿ ಎಂದರೆ ವಾಸ್ತವಕ್ಕಿಂತ ಕಾಲ್ಪನಿಕ ಮತ್ತು ಪವಾಡದ ಅಂಶಗಳು ಹೆಚ್ಚಾಗಿರುವುದು. ಬಾಗ್ದಾದಿನ ರಾಬಿಯ, ತಮಿಳುನಾಡಿನ ಆಂಡಾಳ್, ಕಾಶ್ಮೀರದ ಲಲ್ಲೇಶ್ವರಿ, ಬಹೀನಬಾಯಿ, ಮೀರಾ, ಕಾರಿಕಾಲಮ್ಮ ಮುಂತಾದವರ ಜೀವನವನ್ನು ಕುರಿತು ಅಧ್ಯಯನ ಮಾಡಿದಾಗ ಈ ಅಂಶ ಸ್ಪಷ್ಟವಾಗುತ್ತದೆ. ಇದಕ್ಕೆ ಅಕ್ಕನ ಜೀವನ ಕೂಡ ಹೊರತಾಗಿಲ್ಲ. ಅವಳ ಬಗೆಗೆ ಬಂದಿರುವ ಜೀವನ ಚರಿತ್ರೆಗಳು, ರಗಳೆ, ಮಹಾದೇವಿಯಕ್ಕನ ಪುರಾಣ ಮುಂತಾದ ಕೃತಿಗಳೂ ಕೂಡ ಅಕ್ಕನನ್ನು ದೈವಾಂಶ ಸಂಭೂತೆ, ದೇವರ ವರ, ದೇವರ ಮೀಸಲು ಸತಿ ಎಂದು ಬಣ್ಣಿಸಿವೆ.

ಈ ರೀತಿ ಆಧ್ಯಾತ್ಮ ಸಾಧನೆಗೆ ಹೆಚ್ಚಿನ ಗಮನವನ್ನು ಕೊಡುವುದರ ಮೂಲಕ ಅವಳ ಸ್ವಾತಂತ್ರ್ಯ ಹೋರಾಟದ ಹಂಬಲ ಮತ್ತು ಸಾಮಾಜಿಕ ಸಂಬಂಧಗಳ ನಿರಾಕರಣೆಯ ಕ್ರಮವನ್ನು ಕಡೆಗಣಿಸಲಾಯಿತು. ಇದು ಎಲ್ಲಾ ಸಂತ ಮಹಿಳೆಯರ ವ್ಯಕ್ತಿತ್ವಕ್ಕೂ ಅನ್ವಯಿಸುತ್ತದೆ.

ಈ ಸಂತ ಮಹಿಳೆಯರು ಆಧ್ಯಾತ್ಮ ಜೀವನಕ್ಕೆ ಮುಂದುಗ್ಗಲು ಕಾರಣವಾದ ಅಂಶಗಳನ್ನು ಗಮನಿಸಿದಾಗ ಸಾಮಾನ್ಯವಾಗಿ ಎಲ್ಲರ ಬದುಕಿನ ಹಿನ್ನೆಲೆ ಒಂದೇ ರೀತಿಯದ್ದಾಗಿವೆ. ಬಾಗ್ದಾದಿನ ತೀರಾ ಬಡ ಕುಟುಂಬದಲ್ಲಿ ಜನಿಸಿದ ರುಬಿಯಾ ಬಾಲ್ಯದಲ್ಲಿಯೇ ತಂದೆ – ತಾಯಿಗಳನ್ನು ಕಳೆದುಕೊಂಡು ಸಂಕಷ್ಟದ ಪರಿಸ್ಥಿತಿಯನ್ನು ಎದುರಿಸಿದವಳು. ತಂದೆ ಇಸ್ಮಾಯಿಲ್ ಅಪಾರ ದೈವಭಕ್ತನಾಗಿದ್ದು ಎಲ್ಲಕ್ಕೂ ಅಲ್ಲಾಹನೇ ಕಾರಣವೆಂದು ನಂಬಿದ್ದವನು. ಅವನ ಗಾಢ ಪ್ರಭಾವ ರಾಬಿಯಾ ಮೇಲೆ ಇತ್ತು. ಇದೇ ರೀತಿಯ ಪರಿಸ್ಥಿತಿ ರಾಜಸ್ಥಾನದ ಮೀರಾಬಾಯಿಯದೂ ಕೂಡ. ಚಿಕ್ಕ ವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡು ತಾತರಾವ್ ದೂದಾಜ ಆಶ್ರಯದಲ್ಲಿ ಬೆಳೆದಳು. ರಾವ್ ದೂದಾಜಿ ಅಪಾರ ವಿಷ್ಣು ಭಕ್ತನಾಗಿದ್ದು, ಅನೇಕ ಸಾಧು ಸಂತರ ಸಂಪರ್ಕ ಹೊಂದಿದ್ದ ಆದುದರಿಂದ ಮೀರಾಗೆ ಸಾಧುಸಂತರ ಗೋಷ್ಠಿಗಳಲ್ಲಿ ಭಾಗವಹಿಸುವ ಕೀರ್ತನೆಗಳನ್ನು ಕೇಳುವ ಅವಕಾಶ ದೊರೆಯಿತು. ಅಲ್ಲದೆ ಚಿಕ್ಕ ವಯಸ್ಸಿನಲ್ಲಿಯೇ ತನ್ನ ನಿಕಟವರ್ತಿಗಳನ್ನು ಕಳೆದುಕೊಂಡ ಮೀರಾಗೆ ಮೇವಾಡದ ಭೋಜ ರಾಜನೊಂದಿಗೆ ವಿವಾಹವಾಯಿತು. ನಂತರದ ಕೆಲ ದಿನಗಳಲ್ಲಿಯೇ ಗಂಡನ ಮರಣ, ಅತ್ತೆ ಮನೆಯವರ ಹಿಂಸೆ, ಸಹಜವಾಗಿ ಮೀರಾ ಲೌಕಿಕದಿಂದ ಆಧ್ಯಾತ್ಮದ ಕಡೆಗೆ ಮುಖ ಮಾಡಲು ಕಾರಣವಾಯಿತು.

ಕಾಶ್ಮೀರದ ಪಂಡಿತ ಕುಟುಂಬದಲ್ಲಿ ಹುಟ್ಟಿದ ಲಲ್ಲೇಶ್ವರಿ ಮತ್ತು ಮಹಾರಾಷ್ಟ್ರದ ಬಹೀನಾಬಾಯಿ ಬಾಲ್ಯದಲ್ಲಿ ಅನುಭವಿಸಿದ ಸಂಕಷ್ಟದ ಪರಿಸ್ಥಿತಿ ಮತ್ತು ಅತ್ತೆಯ ಮನೆಯವರ ಹಿಂಸೆಯಿಂದ ತತ್ತರಿಸಿಹೋದವರು. ಆಂಡಾಳ ಮತ್ತು ಕಾರಿಕಾಲಮ್ಮೆಯ ಲೌಕಿಕ ಬದುಕಿನ ಬಗೆಗೆ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.

ಈ ಎಲ್ಲಾ ಸಂಗತಿಗಳನ್ನು ಗಮನಿಸಿದಾಗ ಅಕ್ಕನ ಜೀವನ ಇವರೆಲ್ಲರಿಗಿಂತ ಸ್ವಲ್ಪ ಭಿನ್ನವಾದದ್ದಾಗಿದೆ. ರಾಬಿಯಾ, ಮೀರಾ, ಲಲ್ಲೇಶ್ವರಿ, ಬಹೀನಾರ ರೀತಿ ಅಕ್ಕನಿಗೆ ಬಾಲ್ಯದಿಂದಲೇ ಆಧ್ಯಾತ್ಮ ಪರಿಸರದ ಪ್ರಭಾವವಿತ್ತಾದರೂ ಅವಳು ಬಾಲ್ಯದಲ್ಲಿ ಇವರಂತೆ ಸಂಕಷ್ಟದ ಪರಿಸ್ಥಿತಿಯನ್ನು ಎದುರಿಸಿದವಳಲ್ಲ. ತಂದೆ, ತಾಯಿ ಮತ್ತು ಗುರುಗಳ ತುಂಬು ಹಾರೈಕೆ, ಅಪಾರ ಪ್ರೀತಿ ಇವಳ ಮೇಲಿತ್ತು.

ಈ ಸಂತ ಮಹಿಳೆಯರ ಜೀವನ ಮತ್ತು ಆಧ್ಯಾತ್ಮ ಸಾಧನೆಯ ಹಾದಿಯನ್ನು ಕುರಿತಂತೆ ಹಲವಾರು ದಂತ ಕಥೆಗಳು, ಪೌರಾಣಿಕ ನಂಬಿಕೆಗಳು, ಪವಾಡದ ಘಟನೆಗಳು ಪ್ರಚಲಿತವಾಗಿವೆ. ರಾಬಿಯಾ ಹುಟ್ಟಿನ ನಂತರ ಮಹಮದ್ ಪೈಗಂಬರ್ ಅವಳ ತಂದೆ ಇಸ್ಮಾಯಿಲ್‌ನ ಕನಸಿನಲ್ಲಿ ಬಂದು "ಏಯ್ ಇಸ್ಮಾಯಿಲ್ ನೀನು ದುಃಖಿಸಬೇಡ, ನಿನ್ನ ಈ ಮಗಳು ಮುಂದೆ

ನನ್ನನ್ನು ಅರಿತು ಮಹಾಮಹಿಮ ಸಂತಳಾಗುತ್ತಾಳೆ. ಅವಳ ಪ್ರಾರ್ಥನೆಯಿಂದ ಈ ಜಗತ್ತು ಜಾಗೃತವಾಗುತ್ತದೆ'' [೪] ಎಂದು ನುಡಿದ. ಅಲ್ಲದೆ ರಾಬಿಯಾ ಕೂಡ ಅಶರೀರವಾಣಿಯೊಂದಿಗೆ ಮಾತನಾಡುತ್ತಿದ್ದಳು ಎಂಬ ಉಲ್ಲೇಖಗಳು ಇವೆ. ಒಮ್ಮೆ ಅಶರೀರವಾಣಿಯೊಂದು ಈ ರೀತಿ ಹೇಳುತ್ತದೆ, ''ನೀನು ತೊಂದರೆಪಟ್ಟುಕೊಳ್ಳಬೇಡ ರಾಬಿಯಾ, ಪುನರುಸ್ಥಾನದ ದಿನ ನಮ್ಮ ಸನಿಹದಲ್ಲಿಯೇ ಪರಿಭ್ರಮಿಸುತ್ತಿರುವ ದೇವತೆಗಳೂ ಈರ್ಷೆ ಪಟ್ಟುಕೊಳ್ಳುವ ಪದವಿಯನ್ನು ನೀಡುತ್ತೇನೆ'' [೫] ಎಂದು, ಅಲ್ಲದೆ ರಾಬಿಯಾ ಹಲವಾರು ಬಾರಿ ದೇವರೊಂದಿಗೆ ಸಂಭಾಷಣೆ ನಡೆಸಿದ ಬಗೆಗೆ ವಿವರಗಳಿವೆ. ಒಮ್ಮೆ ರಾಬಿಯಾ ಸತ್ತ ಒಂಟೆಗೆ ಜೀವ ಬರಿಸಿದಳೆಂದೂ, ತನ್ನ ಬೆರಳಿನಿಂದ ದೀಪಗಳನ್ನು ಹಚ್ಚುತ್ತಿದ್ದಳೆಂದೂ ಉಲ್ಲೇಖಗಳಿವೆ. ಈ ರೀತಿಯ ದಂತ ಕಥೆಗಳು ಮತ್ತು ಪವಾಡದ ಅಂಶಗಳು ಇವರ ವ್ಯಕ್ತಿತ್ವವನ್ನು ಆಕರ್ಷಣೀಯವಾಗಿಸಲು ಮಾಡಿದ ಪ್ರಯತ್ನ ಎನಿಸುತ್ತದೆ.

ಆಂಡಾಳ್ ಜನನದ ಬಗೆಗೆ ಕೂಡ ಈ ರೀತಿಯ ಒಂದು ದಂತಕಥೆ ಪ್ರಚಲಿತದಲ್ಲಿದೆ. ವಿಲ್ಲಿಪುತ್ತೂರಿನಲ್ಲಿ ಪೆರಿಯಾಳ್ವಾರರು ತುಳಸಿ ಗಿಡದ ಅಡಿಯಲ್ಲಿ ನೆಲ ಅಗಿಯುತ್ತಿರುವಾಗ ಜನಕನಿಗೆ ಸೀತೆ ದೊರೆತಂತೆ ಪೆರಿಯಾಳ್ವರರಿಗೆ ಗೋದಾ ದೊರೆತಳು [೬], ಭಗವಂತನನ್ನು ಒಡೆಯನನ್ನಾಗಿ ತನ್ನನ್ನೇ ಆಳಾಗಿ ಭಾವಿಸಿದುದರಂದ ಆಂಡಾಳ್ ಆದಳು ಎಂಬ ಉಲ್ಲೇಖವಿದೆ.ಇದು ನಂಬಲು ಅಸಾಧ್ಯವಾದ ಸಂಗತಿ ಎಂಬುದನ್ನು ಗಮನಿಸಬೇಕು. ಅಲ್ಲದೆ ಆಂಡಾಳ್ ವಿವಾಹವನ್ನು ಕುರಿತಂತೆ ಶ್ರೀರಂಗ ಕನಸಿನಲ್ಲಿ ಪ್ರತ್ಯಕ್ಷನಾಗಿ ಆಂಡಾಳನನ್ನು ವಿವಾಹವಾಗುವಂತೆ ತಿಳಿಸಿದ ಎಂಬ ವಿವರವಿದೆ. ಇದೇ ರೀತಿಯ ಕಥೆ ಮೀರಾ ಗಿರಿಧರ ಲಾಲನ ಮೂರ್ತಿಯನ್ನು ಸಾಧುವಿನಿಂದ ಪಡೆದ ಸಂದರ್ಭದಲ್ಲಿಯೂ ಇದೆ. ಇನ್ನು ಲಲ್ಲೇಶ್ವರಿಯ ಬಗೆಗಿನ ದಂತಕಥೆ ಇವರೆಲ್ಲರಿಗಿಂತ ಭಿನ್ನ ರೀತಿಯದ್ದಾಗಿದೆ. ತಾನು ಜನ್ಮಕೊಟ್ಟ ಮಗನನ್ನು ಆರು ಜನ್ಮಗಳ ನಂತರ ವಿವಾಹವಾಗುತ್ತಾಳೆ. ಈ ಆರೂ ಜನ್ಮಗಳಲ್ಲಿ ಅವಳು ಕತ್ತೆ, ನಾಯಿ ಮುಂತಾದ ಪ್ರಾಣಿಗಳಾಗಿ ಹುಟ್ಟುತ್ತಾಳೆ (ಹೆಚ್ಚಿನ ವಿವರ : ವಿಶ್ವದ ಸಂತ ಮಹಿಳೆಯರು – ಬಿ.ನಂ.ಚಂದ್ರಯ್ಯ – ಪು.122) ಈ ಕಥೆಯನ್ನು ಗಮನಿಸಿದಾಗ ಪ್ರಾಣಹಿಂಸೆಯ ಬಗೆಗೆ ವಿರೋಧ ಮತ್ತು ಜಗತ್ತಿನ ಜೀವರಾಶಿಗಳೆಲ್ಲಾ ಒಂದೇ, ಯಾವುದೂ ಮೇಲೂ ಅಲ್ಲ ಕೀಳೂ ಅಲ್ಲ ಎಂಬ ಮನೋಭಾವನೆ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

ಇನ್ನು ಅಕ್ಕನ ಜೀವನ ಚರಿತ್ರೆಯನ್ನು ಗಮನಿಸಿದಾಗ ಹರಿಹರ ಅವಳು ಭೂಲೋಕದಲ್ಲಿ ಹುಟ್ಟಲು ದೇವಲೋಕದಲ್ಲಿ ಮಾಡಿದ ತಪ್ಪೇ ಕಾರಣ ಎಂದು ವರ್ಣಿಸಿದರೆ ಚಾಮರಸ ಲೋಕದ ಉದ್ಧಾರಕ್ಕಾಗಿ ಪಾರ್ವತಿಯೇ ಮಾನವ ರೂಪವನ್ನು ತಳೆದು ಬಂದಳು ಎಂದು ವರ್ಣಿಸುತ್ತಾನೆ. ಹರಿಹರ ತನ್ನ ಮಹಾದೇವಿಯಕ್ಕನ ರಗಳೆಯಲ್ಲಿ ಪಾವರ್ತಿಯು ರುದ್ರ ಕನ್ನಿಕೆಯಾದ ಮಹಾದೇವಿ ಎಂಬುವವಳು ಗುಪ್ತದಣನಾಥನೊಬ್ಬನನ್ನು ಅಹಂಕಾರದಿಂದ ಭವಿ ಎಂದು ನಿಂದಿಸಿದ್ದರ ಪರಿಣಾಮವಾಗಿ ಪಾರ್ವತಿಯ ಶಾಪದಂತೆ ಭೂಲೋಕದಲ್ಲಿ ಭಕ್ತರ ಕುಟುಂಬದಲ್ಲಿ ಹುಟ್ಟಿ ಭವಿಯ ಕೈಹಿಡಿದು, ಪಡಬಾರದ ಬವಣೆಗಳನ್ನು ಪಟ್ಟು ನಂತರ ಭಕ್ತ ಸಮೂಹದಿಂದ ವಂದಿತಳಾಗಿ ಶಿವನನ್ನು ಪತಿಯನ್ನಾಗಿ ಪಡೆಯುತ್ತಾಳೆ ಎಂದು ಚಿತ್ರಿಸಿದ್ದಾನೆ. ಇತ್ತ ಭೂಲೋಕದಲ್ಲಿ ಶಿವಭಕ್ತ ಮತ್ತು ಶಿವಭಕ್ತೆ ಎಂಬ ದಂಪತಿಯರು ಬಹಳ ದಿನಗಳವರೆಗೆ ಮಕ್ಕಳಿರಲಿಲ್ಲವಾದ ಕಾರಣದಿಂದಾಗಿ ಪಾರ್ವತಿಯನ್ನು ಪೂಜೆ ಮಾಡಿ ಅವಳಿಂದ ವರ ಪಡೆದು ಈ ಮಗುವನ್ನು ಪಡೆಯುತ್ತಾರೆ ಎಂದು ಚಿತ್ರಿಸಿದ್ದಾನೆ.

---

೪. ವಿಶ್ವದ ಸಂತ ಮಹಿಳೆಯರು – ಬಿ ನಂ. ಚಂದ್ರಯ್ಯ ಪುಟ – ೧೦೨

೫. ವಿಶ್ವದ ಸಂತ ಮಹಿಳೆಯರು – ಬಿ ನಂ. ಚಂದ್ರಯ್ಯ ಪುಟ – ೧೧೪

೬. ಧರ್ಮ ಮಹಿಳೆ ಮತ್ತು ಸಮಾಜ – ಶಾಂತ ಇಮ್ರಾಪುರ – ಪುಟ – ೮೯

ಇನ್ನು ಚಾಮರಸ ತನ್ನ ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮನಿಂದ ಸೋಲನ್ನುಂಡ ಪಾರ್ವತಿಯ ತಾಮಸರೂಪವಾದ ಮಾಯೆ ನಂತರ ಅಲ್ಲಮನ ಅನುಗ್ರಹದಿಂದ ಆತ್ಮ ಸಾಕ್ಷಾತ್ಕಾರಕ್ಕೆ ಮಾರ್ಗದರ್ಶನ ಪಡೆಯಲು ಸಾತ್ವಿಕ ರೂಪವನ್ನು ಧರಿಸಿ ಮಹಾದೇವಿಯಾಗಿ ಭೂಮಿಗೆ ಬಂದಳು ಎಂಬ ವರ್ಣನೆ ಇದೆ. ಇತರರಿಗೆ ಹೋಲಿಸಿದರೆ ಅಕ್ಕನ ಜೀವನದ ಬಗೆಗೆ ಇರುವಂತಹ ದಂತಕಥೆ ಹಾಗೂ ಪವಾಡದ ಅಂಶಗಳು ತೀರಾ ಕಡಿಮೆ ಎನಿಸುತ್ತದೆ.

ಒಟ್ಟಾರೆ ಈ ಎಲ್ಲಾ ಸಂತ ಮಹಿಳೆಯರ ಜೀವನವನ್ನು ಅವಲೋಕಿಸಿದಾಗ ಅವರ ಹುಟ್ಟಿಗೆ ದೈವ ಪ್ರೇರಣೆಯ ಸ್ವರೂಪವನ್ನು ಕೊಡುವುದರ ಮೂಲಕ ಎಲ್ಲವೂ ಪೂರ್ವಸಿದ್ಧ. ಇವರ ಭೂಲೋಕದ ಕಾರ್ಯಗಳೆಲ್ಲ ದೈವನಿರ್ಮಿತ ಎಂಬ ಭಾವನೆ ಮೂಡಿಸುವುದರ ಮೂಲಕ ಅವರ ಸ್ವತಂತ್ರ ಪ್ರಜ್ಞೆ ಮತ್ತು ಹೋರಾಟದ ಮನೋಭಾವವನ್ನು ಕಡೆಗಣಿಸಲಾಗಿದೆ. ಈ ರೀತಿಯ ಚಿತ್ರಣಗಳಿಂದಾಗಿ ಅವರ ಸ್ವಂತ ಶಕ್ತಿಯನ್ನು ಕುಂಠಿತಗೊಳಿಸಲಾಗಿದೆ. ಆದುದರಿಂದ ಈ ರೀತಿಯ ಕಟ್ಟುಕತೆ ಮತ್ತು ಜೀವನ ಚರಿತ್ರೆಯ ಆಧಾರದಿಂದ ಅವರ ಸಾಧನೆಯನ್ನು ಅಳೆಯುವುದರ ಬದಲು ಅವರ ಸಾಹಿತ್ಯ ರಚನೆಯ ಮೂಲಕ ಸಾಧನೆ ಮತ್ತು ವ್ಯಕ್ತಿತ್ವವನ್ನು ಗುರುತಿಸುವುದು ಹೆಚ್ಚು ಸೂಕ್ತ ಎನಿಸುತ್ತದೆ.

## ಸಂತ ಮಹಿಳೆಯರ ಸಾಹಿತ್ಯ

ಶಿಕ್ಷಣ, ಸಾಹಿತ್ಯದಂತಹ ವಲಯಗಳು ಪುರುಷ ಕೇಂದ್ರಿತವಾಗಿದ್ದ ಸಂದರ್ಭದಲ್ಲಿ ಮಹಿಳೆಯರು ಸಾಹಿತ್ಯ ರಚನೆಗೆ ಮುಂದಾದದ್ದೇ ಒಂದು ರೀತಿಯ ಹೋರಾಟವಾಗಿದೆ. ಎಲ್ಲ ಸಂತ ಮಹಿಳೆಯರೂ ಸಾಹಿತ್ಯವನ್ನು ರಚಿಸಿಲ್ಲವಾದರೂ, ಮೀರಾ, ರಾಬಿಯಾ, ಆಂಡಾಳ, ಲಲ್ಲೇಶ್ವರಿ ಇವರ ಭಕ್ತಿ ಪ್ರಧಾನ ರಚನೆಗಳು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಮಹತ್ವದ ಕಾಣಿಕೆಗಳಾಗಿವೆ. ಅದರಲ್ಲೂ ಅಕ್ಕನ ವಚನಗಳು ಭಾವಗೀತಾತ್ಮಕ ಮಾದರಿಯದ್ದಾಗಿದ್ದು ವಿಭಿನ್ನತೆ ಹಾಗೂ ವಿಶೇಷತೆಯಿಂದ ಕೂಡಿದೆ. ಇವಳ ವಚನಗಳಲ್ಲಿ ಸಮಾಜವನ್ನು ಎದುರಿಸುವ ಧೈರ್ಯ, ದಿಟ್ಟತನ, ವಿಶ್ವಾಸ, ತನ್ನ ವ್ಯಕ್ತಿತ್ವವನ್ನು ಸಮರ್ಥಿಸಿಕೊಳ್ಳುವ ಜಾಣ್ಮೆ ಎದ್ದು ಕಾಣುತ್ತದೆ.

ಮೀರಾ, ರಾಬಿಯಾ, ಆಂಡಾಳ್, ಲಲ್ಲೇಶ್ವರಿ ಮತ್ತು ಅಕ್ಕ ಇವರ ಸಾಹಿತ್ಯ ರಚನೆಯನ್ನು ಗಮನಿಸಿದಾಗ ಪ್ರಧಾನವಾಗಿ ಕಂಡುಬರುವ ಅಂಶವೆಂದರೆ ದೇವರ ಬಗೆಗಿನ ಪ್ರೀತಿ, ಅವನನ್ನು ಕಾಣಲು ಪರಿತಪಿಸುವ ಬಗೆ, ಆಲೋಚನಾ ಕ್ರಮ, ಹುಡುಕಾಟ, ಉತ್ಕಟತೆ, ಕಾತರತೆ ಇವುಗಳ ಬಗೆಗಿನ ಅಭಿವ್ಯಕ್ತಿ ಸಾಮಾನ್ಯವಾಗಿ ಒಂದೇ ರೀತಿಯದ್ದಾಗಿರುವುದು. ಅಲ್ಲದೆ ಈ ಎಲ್ಲಾ ಅನುಭವಿಗಳೂ ದೇವರನ್ನು ಕಂಡದ್ದು ಕನಸಿನಲ್ಲಿ, ಪ್ರಕೃತಿಯಲ್ಲಿ ಮತ್ತು ತಮ್ಮ ತಮ್ಮ ಅಸ್ತಿತ್ವದಲ್ಲಿ. ಅವರು ತಮ್ಮ ಎಲ್ಲಾ ನೋವು, ನಲಿವು, ಸಂಕಷ್ಟಗಳನ್ನು ಮನಬಿಚ್ಚಿ ಹೇಳಿಕೊಳ್ಳುವುದು ಸಖಿಯರ, ಗೆಳತಿಯರ ಹತ್ತಿರ ಎಂಬುದು ಮತ್ತೊಂದು ವಿಶೇಷ

ಸ್ವಪ್ನದಲ್ಲಿ ಆಂಡಾಳ ತನ್ನ ಪ್ರಿಯಕರನನ್ನು ಕಂಡ ದೃಶ್ಯವನ್ನು ಈ ರೀತಿ ವಿವರಿಸುತ್ತಾಳೆ

**ಕದಿರೊಳ್ ದೀಪಮ್ ಕುಲಶ ಮಂಡನೇನ್ದಿ**
**ಕದಿರಳ್ ಮುಂಗೈಯರ್ ಕಾಮ್ ವನ್ದಿರ್‌ಕೊಳ್**
**ಮದುರೈಯಾರ್ ಮುನ್ನನಡೆನಿಲ್ಪೈ ತೊಟ್ಟೆಂಗುಂ**
**ಆದಿರಪ್ಪ ಕುದಕ್ಕನಾ ಕ್ಕಂಡೇನ್ ತೋವೆನಾನ್**

(ಹೇ ಸಖಿಯೇ ಚಾತುರ್ಯವುಳ್ಳ ಸುಂದರಿಯಾದ ತರುಣಿಯರು ಸೂರ್ಯ ಪ್ರತಿಭೆಯಂತೆ ಇರುವ ದೀಪಗಳುಳ್ಳ ಚಿನ್ನದ ಕಲಶಗಳನ್ನು ಕೈಯಲ್ಲಿ ಧರಿಸಿ ಎದುರುಗೊಳ್ಳಲು ಮಧುರನಾಥನಾದ ಶ್ರೀಕೃಷ್ಣನು ತನ್ನ ಪಾದುಕೆಗಳನ್ನು ಪಕ್ಕದಲ್ಲಿದ್ದವರ ಕೈಯಲ್ಲಿ ಕೊಟ್ಟು ಭೂಮಿಯೆಲ್ಲ ನಡಗುವಂತೆ ಧೀರವಾಗಿ ಬರುವ ಸ್ವಪ್ನ ಕಂಡೆನು).[೭]

ಇದನ್ನು ನೋಡಿದಾಗ ತಟ್ಟನೆ ನೆನಪಾಗುವುದು ಅಕ್ಕನ ಈ ವಚನ

ಅಕ್ಕ ಕೇಳವ್ವ ನಾನೊಂದು ಕನಸ ಕಂಡೆ
ಅಕ್ಕಿ ಅಡಿಕೆ ಓಲೆ ತೆಂಗಿನಕಾಯಿ ಕಂಡೆ
ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವಾ
ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು [೮]

ಈ ಇಬ್ಬರೂ ಕೂಡ ತಮ್ಮ ಮನದಾಳದ ಮಾತುಗಳನ್ನು ಹೇಳಿಕೊಳ್ಳುವುದು ತಮ್ಮ ಗೆಳತಿಯರ ಹತ್ತಿರ. ಆಂಡಾಳ ತನ್ನ ಕನಸಿನಲ್ಲಿ ಕಂಡ ಶ್ರೀಕೃಷ್ಣನ ರುದ್ರ ಅವತಾರವನ್ನು ವರ್ಣಿಸಿದರೆ, ಅಕ್ಕ ಚೆನ್ನಮಲ್ಲಿಕಾರ್ಜುನನ ಸೌಮ್ಯ ಅವತಾರವನ್ನು ವರ್ಣಿಸುತ್ತಾಳೆ. ಅಲ್ಲದೆ ಶುಭ ಸಂಕೇತಗಳಾದ ಅಕ್ಕಿ, ಅಡಿಕೆ, ಓಲೆ, ತೆಂಗಿನ ಕಾಯಿಗಳನ್ನು ಕನಸಿನಲ್ಲಿ ಕಾಣುತ್ತಾಳೆ. ತನ್ನ ಮನಸ್ಸಿನ ಒಡೆಯ ಮಲ್ಲಿಕಾರ್ಜುನ ಯಾವ ವೇಶದಲ್ಲಿ ಬಂದರೂ ಸಹ ಅವನನ್ನು ಗುರುತಿಸುವ ಸಾಮರ್ಥ್ಯ ಅಕ್ಕನದು. ಆದುದರಿಂದಲೇ ಅಕ್ಕ ತಾನೇ ಅವನ ಬೆನ್ನತ್ತಿ ಹೋಗಿ ಕೈಹಿಡಿಯುತ್ತಾಳೆ. ಇಲ್ಲಿ ಅಕ್ಕ ಚೆನ್ನಮಲ್ಲಿಕಾರ್ಜುನನ್ನು ಪಡೆಯಲು ಪಡುವ ತವಕ, ಕಾತರ, ಸಮಾಜದ ನಿಂದೆಗಳಿಗೆ ಗಮನ ಹರಿಸದೆ ಎಲ್ಲ ಎಲ್ಲೆಗಳನ್ನು ಮೀರುವ ಛಲ, ದಿಟ್ಟತನ ವ್ಯಕ್ತವಾಗುತ್ತದೆ. ಆದರೆ ಆಂಡಾಳಲ್ಲಿ ಆ ರೀತಿಯ ಎದೆಗಾರಿಕೆ ಕಂಡುಬರುವುದಿಲ್ಲ, ಏಕೆಂದರೆ ಆಂಡಾಳ ಅಕ್ಕನ ರೀತಿ ಸಮಾಜದೊಂದಿಗೆ ಸಂಘರ್ಷಕ್ಕೆ ಒಳಗಾಗಲಿಲ್ಲ, ಅಲ್ಲದೆ ಅವಳು ಎದುರಿಸಿದ ಸಮಸ್ಯೆಗಳೂ ಸಹ ಕಡಿಮೆ. ಆದುದರಿಂದಲೇ ಅಕ್ಕನ ರೀತಿಯ ತೀವ್ರವಾದ ಸಮಾಜ ನಿಂದನೆ, ಮಿಕ್ಕು ಮೀರಿ ಹೋಗುವ ಕ್ರಮ ಆಂಡಾಳಗೆ ಸಾಧ್ಯವಾಗಲಿಲ್ಲ. ಜೊತೆಗೆ "ಅಕ್ಕನ ವಿಚಾರ ಪ್ರಖರತೆ, ಜಿಜ್ಞಾಸೆ, ಸಿದ್ಧಾಂತ ಆಂಡಳಿಗೆ ಇಲ್ಲ" [೯] ಎಂಬ ಶಾಂತ ಇಮ್ರಾಪುರ ಅವರ ಮಾತು ಅಕ್ಷರ ಸಹ ಸತ್ಯ.

ಮೀರಾ ರಚನೆಯಲ್ಲಿ ಕೂಡ ಸ್ವಪ್ನದ ವಿವರವನ್ನು ಕಾಣಬಹುದು.

ತಾಯಿ ಸ್ವಪ್ನದಲ್ಲಿ ದೀನನಾಥ ನನ್ನನ್ನೆವರಿಸಿದ
ಐವತ್ತಾರು ಕೋಟಿ ದೇವತೆಗಳೆಲ್ಲ । ನನ್ನ ಪರಿಣಯಕ್ಕೆ ಬಂದಿದ್ದರು
ಬ್ರಜರಾಜ ನನ್ನವರ । ಕನಸಲ್ಲೆ ಕಟ್ಟಿದರು ತೋರಣಗಳನು
ನನ್ನ ಕೈ ಹಿಡಿದ ಕನಸಿನಲೆ....
ಪೂರ್ವ ಜನ್ಮದ ಸುಕೃತದಿಂದಾಗಿ ಗಿರಿಧರನೆ ಮೀರಾಳ ಗಂಡನಾದ[೧೦]

---

೭. ಸಿದ್ದಗಂಗಾ ಮಾಸ ಪತ್ರಿಕೆ, ಡಿಸೆಂಬರ್ ೨೦೦೬ - ಪುಟ - ೨೦
೮. ಸಮಗ್ರ ವಚನ ಸಂಪುಟ - ಭಾಗ-೫ - ವ - ೯
೯. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪುಟ - ೧೩೫
೧೦. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪುಟ ೧೩೫

ಇಲ್ಲಿ ಸ್ವಪ್ನದೊಂದಿಗೆ ವಿವಾಹದ ವರ್ಣನೆ ಸಹ ಇದೆ. ಇದರಲ್ಲಿ ದೇವಾನುದೇವತೆಗಳೆಲ್ಲಾ ಹಾಜರಿದ್ದು ಕನಸಿನಲ್ಲಿ ನಡೆದ ವಿವಾಹವಾಗಿದೆ. ಮೀರಾಗೆ ವಾಸ್ತವದಲ್ಲಿ ಸಾಧ್ಯವಾಗದ ಗಿರಿಧರನೊಂದಿಗಿನ ವಿವಾಹ ಸಂಬಂಧ ಅಕ್ಕನಿಗೆ ಸಾಧ್ಯವಾಗುತ್ತದೆ. ಅವಳ ಒಂದು ವಚನದಲ್ಲಿ ವಿವಾಹದ ವರ್ಣನೆ ಈ ರೀತಿ ಇದೆ

ಪಚ್ಚೆಯ ನೆಲೆಗಟ್ಟು ಕನಕದ ತೋರಣ, ವಜ್ರದ ಕಂಬ
ಹವಳದ ಚಪ್ಪರವಿಕೆ ಮುತ್ತು ಮಾಣಿಕವ ಮೇಲುಕಟ್ಟ ಕಟ್ಟಿ
ಮದುವೆಯ ಮಾಡಿದರು ಎಮ್ಮವರೆನ್ನ ಮದುವೆಯ ಮಾಡಿದರು
ಕಂಕಣ ಕೈಧಾರೆ ಸ್ಥಿರಸೀಸೆಯನಿಕ್ಕ
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆ ಮಾಡಿದರು ೧೧

ಮತ್ತೊಂದು ವಚನದಲ್ಲಿ....

ಜಲದ ಮಂಟಪದ ಮೇಲೆ ಉರಿಯ ಚಪ್ಪರವಿಕ್ಕಿ
ಆಲಿಕಲ್ಲ ಹಸೆಯ ಹಾಸಿ ಬಾಸಿಗವ ಕಟ್ಟಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ
ಮದುವೆಯಾ ಮಾಡಿದರೆಲೆ ಅವ್ವಗಳಿರಾ ೧೨

ಎನ್ನುತ್ತಾಳೆ. ಈ ವಚನಗಳನ್ನು ಗಮನಿಸಿದಾಗ ಮೊದಲ ವಚನದಲ್ಲಿ ಅತ್ಯಂತ ವೈಭವಯುತವಾದ ವಿವಾಹದ ವರ್ಣನೆಯಿದ್ದರೆ ಎರಡನೆಯದರಲ್ಲಿ ಅಸಾಧ್ಯವಾದ ಮದುವೆಯ ವರ್ಣನೆಯಿದೆ.

ಪಚ್ಚೆ ಹವಳ, ಮುತ್ತು, ಕನಕ, ವಜ್ರ ಇವೆಲ್ಲಾ ಅತ್ಯಂತ ಬೆಲೆ ಬಾಳುವ ವಸ್ತುಗಳು ಮತ್ತು ಶ್ರೇಷ್ಠತೆಯ ಸಂಕೇತ. ಅಕ್ಕನ ಚೆನ್ನಮಲ್ಲಿಕಾರ್ಜುನ ಸಹ ಅದೇ ರೀತಿ, ಇಂತಹ ವಿವಾಹ ಸಂದರ್ಭದಲ್ಲಿ ಗುರು ತೆತ್ತಿಗನಾಗಿ ಲಿಂಗ ಮದುವಳಿಗನಾಗಿ ಅಕ್ಕ ಮದುವಳಗಿತ್ತಿಯಾಗುತ್ತಾಳೆ. "ಈ ಭುವನವನ್ನರಿಯಲು ಅಸಂಖ್ಯಾತರೆನಗೆ ತಂದೆ-ತಾಯಿಗಳು" ಎನ್ನುವ ಅಕ್ಕ ಕುಟುಂಬಕ್ಕೆ ಬಹಳ ವಿಶಾಲವಾದ ಸ್ವರೂಪವನ್ನೇ ನೀಡಿದ್ದಾಳೆ.

ಜಲದ ಮಂಟಪ, ಉರಿಯ ಚಪ್ಪರ, ಆಲಿಕಲ್ಲ ಹಸೆ ಇವೆಲ್ಲ ಒಂದಕ್ಕೊಂದು ವಿರೋಧವಾದ, ಸಾಧಿಸಲು ಅಸಾಧ್ಯವಾದ ಸಂಗತಿಗಳು. ಕಾಲಿಲ್ಲದ ಹೆಂಡತಿ, ತಲೆಯಿಲ್ಲದ ಗಂಡ ಮದುವೆಯಾಗುವುದು ಸಹ ಅಸಾಧ್ಯ. ಆದರೆ ಅದು ಅಕ್ಕನಲ್ಲಿ ಸಾಧ್ಯವಾಗುತ್ತದೆ. ಗಂಡು ಹೆಣ್ಣು ಎಂಬ ಭೇದವಿಲ್ಲದೆ, ಎರಡೂ ಒಂದಾಗುವ ಅನನ್ಯತೆ ಸಂಪೂರ್ಣತೆಯ ವಿವಾಹ ಅಂತಹ ಪರಿಪೂರ್ಣ ವ್ಯಕ್ತಿತ್ವವನ್ನು ಅಕ್ಕ ಬೆಳೆಸಿಕೊಂಡಿರುವುದರಿಂದ ಎಂದೆಂದೂ ಬಿಡದ ಬಾಳುವೆ ತನ್ನದು ಎಂಬ ಅಚಲತೆ ಇದೆ. ಈ ರೀತಿಯ ದೃಢವಿಶ್ವಾಸ, ನಂಬಿಕೆಯನ್ನು ಅಕ್ಕನನಂತೆ ಬೇರೆಯವರಲ್ಲಿ ಕಾಣಲು ಸಾಧ್ಯವಿಲ್ಲ.

---

೧೧. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ೨೨೬

೧೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ೧೭೬

ಕಾಶ್ಮೀರದ ಶೈವ ಸಂತ ಮಹಿಳೆ ಲಲ್ಲಯೋಗೀಶ್ವರಿಯ ಒಂದು ರಚನೆ ಈ ರೀತಿ ಇದೆ

**ಎಂದಿಗೆ ನನ್ನ ನಾಚಿಕೆ ಕಳೆದೀತು**
**ಎಂದಿಗೆ ನಾನು ಹೊಗಳಿಕೆ, ತೆಗಳಿಕೆ ಸಹಿಸೇನು**
**ಎಂದಿಗೆ ನನ್ನಲ್ಲಿ ಸಂಕೋಚವು ಸುಟ್ಟು ಬೂದಿಯಾದೀತು**
**ಎಂದಿಗೆ ಒಳ್ಳೆಯ ಮತ್ತು ಕೆಟ್ಟ ವಿಷಯಗಳು**
**ಕಿವಿಗೆ ಕೇಳದೆ ಕಣ್ಣಿಗೆ ಕಾಣದೆ ಹೋದಾವು**
**ಎಂದಿಗೆ ಪರಮೇಶ್ವರನ ಪ್ರೇರಣೆಯ ನನ್ನ ಮನಸ್ಸಿನಲ್ಲಿ ಮೊಳಗೀತು** [೧೩]

ಎನ್ನುವ ಲಲ್ಲೀಶ್ವರಿಯ ಮನಸ್ಸಿನ ಮೂಲೆಯಲ್ಲಿ ತನ್ನ ಕಾರ್ಯ ಸಾಧ್ಯವಾದೀತೇ? ಎಂಬ ಅಳುಕು ಎದ್ದು ಕಾಣುತ್ತದೆ. ಜೊತೆಗೆ ದೈವದ ಅನುಗ್ರಹವನ್ನು ಪಡೆದೇ ತೀರುತ್ತೇವೆ ಎಂಬ ದೃಢವಿಶ್ವಾಸ ವ್ಯಕ್ತವಾಗುವುದಿಲ್ಲ.

ಇನ್ನು ತಮ್ಮ ಇಷ್ಟ ದೈವವನ್ನು ಕೂಡುವ, ಅವನ ಅಗಲಿಕೆಯ ನೋವನ್ನು ವಿವರಿಸುವ, ಲೋಕದ ಗಂಡನನ್ನು ವಿರೋಧಿಸುವ, ರೀತಿಯ ಪದ್ಯಗಳನ್ನು ಮೀರಾ ಮತ್ತು ಅಕ್ಕನ ರಚನೆಗಳಲ್ಲಿ ಕಾಣಬಹುದು. ಮೀರಾ "ಸಖಿ ನಾನಂತೂ ಪ್ರೇಮೋದಾದ್ಧಿನಿ, ನನ್ನನೋವನ್ನು ಯಾರೂ ಅರಿಯಲು, ಮುಳ್ಳಿನ ಮೇಲೆ ನನ್ನ ಹಾಸಿಗೆಯಿದ್ದು ಇದರ ಮೇಲೆ ಮಲಗುವುದಾದರೂ ಹೇಗೆ. ನಾನು ನೋವಿನಿಂದಾಗಿ ಹುಚ್ಚಳಾಗಿದ್ದೇನೆ. ನನ್ನ ನೋವನು ಯಾರೂ ಅರಿಯರು. ಗಾಯಗೊಂಡವನ ನೋವನ್ನು ಗಾಯಗೊಂಡವ ಮಾತ್ರ ಅರಿಯಬಲ್ಲ" [೧೪] ಎಂದು ತನ್ನ ಅಂತರಾಳದ ನೋವನ್ನು ಹೇಳಿಕೊಳ್ಳುತ್ತಾಳೆ. ಅವಳಿಗೆ ಲೌಕಿಕ ಜೀವನವೇ ಮುಳ್ಳಿನ ಹಾಸಿಗೆಯಾಗಿದೆ. ಈ ಲೌಕಿಕ ಬದುಕಿನ ವಿಮುಕ್ತಿಗಾಗಿ ಬಯಸುತ್ತಿದ್ದಾಳೆ.

ಅಕ್ಕನ ಈ ವಚನಗಳಲ್ಲಿ ಇದೇ ರೀತಿಯ ಭಾವ ವ್ಯಕ್ತವಾಗಿರುವುದನ್ನು ಕಾಣಬಹುದು

**ಎರದ ಮುಳ್ಳಿನಂತೆ ಪರಗಂಡರೆನಗವ್ವಾ**
**ಸೋಕಲಮ್ಮೆ ಸುಳಿಯಲಮ್ಮೆ**
**ನಂಬಿ ನಚ್ಚಿ ಮಾತಾಡಲಮ್ಮೆನವ್ವಾ**
**ಚೆನ್ನಮಲ್ಲಿಕಾರ್ಜುನನಲ್ಲದ ಗಂಡಂಗೆ**
**ಎರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ** [೧೫]

ಎಂದು ತಾನು ಲೋಕದ ಗಂಡನನ್ನು ತಿರಸ್ಕರಿಸಲು ಕಾರಣವೇನೆಂದು ಹೇಳುತ್ತಾಳೆ. ಚೆನ್ನಮಲ್ಲಿಕಾರ್ಜುನನನ್ನ ಅಗಲಿದ ನೋವನ್ನು ಅಕ್ಕ ಈ ರೀತಿ ಬಣ್ಣಿಸಿದ್ದಾಳೆ

**ಬಂಜೆ ಬೇನೆಯನರಿವಳೆ?**
**ಬಲದಾಯಿ ಮದ್ದ ಬಲ್ಲಳೆ?**
**ನೊಂದವರ ನೋವ ನೋಯದವರೆತ್ತ ಬಲ್ಲರೋ?**
**ಚೆನ್ನಮಲ್ಲಿಕಾರ್ಜುನಯ್ಯ ಸಿರಿದಲಗು**
**ಒಡಲಲ್ಲಿ ಮುರಿದು ಹೊರಳುವೆನ್ನಳಲನು**
**ನೀವೆತ್ತ ಬಲ್ಲಿರೆ, ಎಲೆ ತಾಯಿಗಳಿರಾ?** [೧೬]

---

೧೩. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪು - ೧೦೬
೧೪. ವಿಶ್ವದ ಸಂತ ಮಹಿಳೆಯರು ಬಿ.ನಂ.ಚಂದ್ರಯ್ಯ - ಪು - ೧೧೪
೧೫. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ೮೬
೧೬. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ೨೩೬

ಎನ್ನುವ ಅಕ್ಕ ಮತ್ತು ಮೀರಾಳ ಪದ್ಯಗಳಲ್ಲಿ ತಮ್ಮ ನೋವಿನ ಆಳದ ಅಳಲಿದೆ. ಜೊತೆಗೆ ತಮ್ಮ ನೋವನ್ನು ಯಾರೊಂದಿಗೂ ಹಂಚಿಕೊಳ್ಳಲು ಸಾಧ್ಯವಿಲ್ಲ ಎಂಬ ವಿಷಾದ. ಹಂಚಿಕೊಂಡರೂ ಕೂಡ ಅದನ್ನು ಅವರು ಅರಿಯಲು ಸಾಧ್ಯವಿಲ್ಲ ಎಂಬ ತೀವ್ರವಾದ ವೇದನೆ ಇಲ್ಲಿ ವ್ಯಕ್ತವಾಗಿವೆ. ಮೀರಾ ತನ್ನ ನೋವನ್ನು ಗಾಯಕ್ಕೆ ಹೋಲಿಸಿದರೆ, ಹೊಟ್ಟೆಯಲ್ಲಿ ಮುರಿದಿರುವ ಕತ್ತಿಯ ನೋವಿನ ರೀತಿ ಚೆನ್ನಮಲ್ಲಿಕಾರ್ಜುನನನ್ನ ಅಗಲಿದ ನೋವು ಎಂದು ರೂಪಕಾತ್ಮಕವಾಗಿ ಹೇಳುತ್ತಾಳೆ. ಆದುದರಿಂದಲೇ ಅಕ್ಕನ ವಚನಗಳು ಹೆಚ್ಚು ಆಕರ್ಷಣೀಯವಾಗಿ ಕಾಣುವುದು.

ಸಮಾಜ ವಿಮರ್ಶೆಗೆ ಇವರು ಪ್ರತಿಕ್ರಿಯಿಸಿದ ರೀತಿ ಕೂಡ ಒಂದೇ ರೀತಿಯದ್ದಾಗಿದೆ. ಲಲ್ಲೇಶ್ವರಿ,

**ನನ್ನನ್ನು ಅವಮಾನಿಸಿ ತೆಗಳಿದರು**
**ಅಪಕೀರ್ತಿಯನ್ನುಂಟು ಮಾಡಿದರು**
**ಆದರೂ ಆಸೆಯು ನನ್ನನ್ನು ಬಿಡಲಿಲ್ಲ**
**ನಾನು ಸಿದ್ಧಿಯನ್ನು ಪಡೆದ ನಂತರ**
**ನನ್ನಲ್ಲಿ ಉಳಿಯುವುದೇನಿದೆ**
**ಆಗ ಸಂತೋಷ ಸಂತಾಪಗಳು ನನ್ನಲ್ಲಿ**
**ಯಾವ ಪರಿಣಾಮವನ್ನುಂಟು ಮಾಡಲಾರವು** [೧೭]

ಎಂದು ಸಮಾಜ ತನ್ನನ್ನು ನಿಂದಿಸಿದ ಬಗೆ ಮತ್ತು ಅದರಿಂದ ತನಗೆ ಯಾವುದೇ ರೀತಿಯ ನೋವಾಗಲಿ, ಅವಮಾನವಾಗಲಿ ಆಗಿಲ್ಲ ಎಂದು ತಿಳಿಸಿದರೆ, ಮೀರಾ "ಕೋಯಿ ನಿಂದೂ ಕೊಯಿ ಬಿಂದೂ ಗುಣ ಗೋವಿಂದ್ ರಾ ಗಾಸಾ" ಎಂದು ನಿರ್ಲಿಪ್ತ ಮನೋಭಾವನೆಯನ್ನು ವ್ಯಕ್ತಪಡಿಸುತ್ತಾಳೆ. ಸಮಾಜದಿಂದ ತೀವ್ರ ನಿಂದನೆಗೆ ಗುರಿಯಾದ ಅಕ್ಕ,

**ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯಾ?**
**ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆ ತೊರೆಗಳಿಗಂಜಿದಡೆಂತಯ್ಯಾ?**
**ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ?**
**ಚೆನ್ನಮಲ್ಲಿಕಾರ್ಜುನ ದೇವ ಕೇಳಯ್ಯಾ**
**ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದೆಡೆ**
**ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು** [೧೮]

ಎನ್ನುವ ಮೂಲಕ ತನ್ನ ಮನಸ್ಸಿಗೆ ತಾನೇ ಸಮಾಧಾನವನ್ನು ತಂದುಕೊಳ್ಳುತ್ತಾಳೆ. ಜೊತೆಗೆ 'ಸ್ತುತಿ ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಿನಯಾಗಿರಬೇಕು' ಎಂಬ ತಾತ್ವಿಕ ಚಿಂತನೆ ಅಕ್ಕನದು. ಅಕ್ಕನ ಈ ರೀತಿಯ ದಿಟ್ಟ ಪ್ರತಿಕ್ರಿಯೆಗೆ ಸಮಾಜ ಅವಳನ್ನು ನಡೆಸಿಕೊಂಡ ಬಗೆಯೇ ಕಾರಣ.

ಈ ಎಲ್ಲ ಸಾಧಕಿಯರ ಸಾಹಿತ್ಯ ರಚನೆಯಲ್ಲಿ ಸಾಮ್ಯತೆಯಿದ್ದರೂ ಕೂಡ ಅಕ್ಕನ ವಚನಗಳಲ್ಲಿ ಕಂಡುಬರುವ ಸಾಹಿತಿಕ ಮೌಲ್ಯ, ಭಾವನಾತ್ಮಕ ಗೇಯತೆ, ತಾತ್ವಿಕ ಜಿಜ್ಞಾಸೆ, ಚಿಂತನಾಶೀಲ ಮನೋಭಾವ, ರೂಪಕಗಳ ಮೂಲಕ ಇಡೀ

---

೧೭. ಧರ್ಮ ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ - ಪುಟ - ೧೧೦

೧೮. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ೨೫೩

ಸನ್ನಿವೇಶವನ್ನು ಕಟ್ಟಿಕೊಡುವ ಸಾಮರ್ಥ್ಯ ಈ ಎಲ್ಲಾ ಗುಣಗಳಿಂದಾಗಿ ಅವಳ ಸಾಹಿತ್ಯ ಇವರೆಲ್ಲರಿಗಿಂತ ಭಿನ್ನವಾದುದಾಗಿದೆ. ಈ ದೃಷ್ಟಿಯಿಂದಲೇ ಅಕ್ಕನ ಸಾಹತ್ಯ ಸಾಧನೆ ಇವರೆಲ್ಲರಿಗಿಂತ ವಿಭಿನ್ನವಾದದ್ದು ಮತ್ತು ಮೌಲ್ಯಯುತವಾದದ್ದು.

## ಸಂತ ಮಹಿಳೆಯರ ಆಧ್ಯಾತ್ಮಿಕ ಹೋರಾಟದ ಮಾದರಿ

ಇವರು ತಮ್ಮ ಹೋರಾಟವನ್ನು ಪ್ರಾರಂಭಿಸಿದ್ದು ಆಧ್ಯಾತ್ಮ ಸಾಧನೆಗೆ ಮುನ್ನುಗ್ಗುವುದರ ಮೂಲಕ. ಈ ಎಲ್ಲಾ ಮಹಿಳೆಯರ ಗುರಿ ಒಂದೇ ಆದರೂ ಕೂಡ ಅದನ್ನು ಮುಟ್ಟಲು ಕ್ರಮಿಸಿದ ಮಾರ್ಗ ಮಾತ್ರ ಭಿನ್ನವಾದದ್ದು. ಪ್ರತಿಯೊಬ್ಬರೂ ತಮ್ಮ ಆರಾಧ್ಯ ದೈವವನ್ನು ಕಾಣುವ, ಕೂಡುವ, ಅವನಲ್ಲಿ ಒಂದಾಗುವ ಇಂಗಿತವನ್ನು ಹೊಂದಿದ್ದರೂ ಕೂಡ ಅದಕ್ಕೆ ಆರಿಸಿಕೊಂಡ ಸಾಧನ ಮಾತ್ರ ಬೇರೆ ಬೇರೆಯಾದದ್ದು. ಒಬ್ಬರದು ದ್ವೈತವಾದರೆ ಮತ್ತೊಬ್ಬರದು ಅದ್ವೈತ. ಒಬ್ಬರದು ನಿರ್ಮಲ ಭಕ್ತಿಯಾದರೆ ಮತ್ತೊವಬ್ಬರದು ನಿಷ್ಕಲ್ಮಶ ಪ್ರೇಮ. ಈ ರೀತಿ ಒಬ್ಬರಿಂದ ಒಬ್ಬರಿಗೆ ಭಕ್ತಿಯ ಆಧ್ಯಾತ್ಮದ ಹಾದಿಯಲ್ಲಿ ಭಿನ್ನತೆ ಮತ್ತು ವೈವಿಧ್ಯತೆ ಇದ್ದೇ ಇದೆ.

ಇರಾನ್‌ನ ರಾಬಿಯಾಗೆ ಅಲ್ಲಾಹನ ಬಗ್ಗೆ ಇದ್ದದ್ದು ನಿರ್ಮಲವಾದ ಭಕ್ತಿ. ದೇವರಲ್ಲಿ ಏನನ್ನೂ ಬೇಡುವ ಮನೋಭಾವ ಇವಳಲ್ಲಿ ಕಂಡುಬರುವುದಿಲ್ಲ. ಸ್ವರ್ಗಸುಖ ಪ್ರಾಪ್ತಿಗಾಗಿ ಅಲಾಹನನ್ನು ಪ್ರಾರ್ಥಿಸಬಾರದು, ಕೇವಲ ಅಲ್ಲಾಹನಿಗಾಗಿ ಮಾತ್ರ ಆವನನ್ನು ಪ್ರಾರ್ಥಿಸಬೇಕು ಎಂಬುದು ಇವಳ ಅಭಿಪ್ರಾಯ. ಇವಳ ಸ್ವರ್ಗ, ನರಕ ಕಲ್ಪನೆಯ ಬಗೆಗೆ ವಿರೋಧವನ್ನು ಹೊಂದಿದ್ದು "ಓ ದೇವರೇ ನಾನು ನರಕದ ಭಯದಿಂದ ನಿನ್ನನ್ನು ಪ್ರಾರ್ಥಿಸಿದ್ದೇ ಆದರೆ, ನೀನು ನನ್ನನ್ನು ನರಕಕ್ಕೆ ತಳ್ಳಿಬಿಡು. ಒಂದು ವೇಳೆ ನನ್ನ ಪ್ರಾರ್ಥನೆ ಸ್ವರ್ಗವನ್ನೇ ಪಡೆಯುವ ಆಸೆಯಿಂದ ಕೂಡಿದ್ದರೆ ಅದು ನನ್ನ ಕೆಟ್ಟ ಕೆಲಸವೆಂದು ನನ್ನನ್ನು ನಿಂದಿಸು. ಒಂದು ವೇಳೆ ನಾನು ಕೇವಲ ನಿನಗಾಗಿ ಪೂಜಿಸಿದರೆ ನನ್ನನ್ನು ನನ್ನ ಪ್ರಿಯತಮನಿಂದ ದೂರ ಮಾಡದಿರು. ನಿನ್ನ ಶಾಶ್ವತ ಸೌಂದರ್ಯವನ್ನು ನನ್ನಿಂದ ಮರೆ ಮಾಡದಿರು"[೧೯] ಎಂದು ಪ್ರಾರ್ಥಿಸುತ್ತಾಳೆ. ಅಲ್ಲದೆ ಜಗತ್ತಿನ ಸಕಲ ವಸ್ತುವಿನಲ್ಲಿಯೂ ಕೂಡ ಅಲ್ಲಾಹನನ್ನು ಕಾಣುವ ಮನೋಭಾವ ಅವಳದು. ತನ್ನ ಸಮಸ್ಯೆಯನ್ನು ಕಷ್ಟಗಳನ್ನು ಪರಿಹರಿಸಿಕೊಳ್ಳಲಿಕ್ಕಾಗಿ ಭಗವಂತನನ್ನು ಪ್ರಾರ್ಥಿಸಬೇಕು ಎಂಬ ಮನೋಭಾವವನ್ನು ಸಂಪೂರ್ಣ ವಿರೋಧಿಸುತ್ತಾಳೆ ರಾಬಿಯಾ.

ಮೀರಾಳಿಗೆ ಗಿರಿಧರನ ಬಗ್ಗೆ ಇದ್ದದ್ದು ಸಂಪೂರ್ಣ ತಲ್ಲೀನತೆಯ ಅದ್ವೈತ ಭಕ್ತಿ. ತಾನೇ ಬೇರೆ ಕೃಷ್ಣನೇ ಬೇರೆ ಎಂದು ನಂಬಿದ್ದವಳು. ಮೀರಾ, ಕೃಷ್ಣನನ್ನು ಒಮ್ಮೆ ನಿರ್ಗುಣ ನಿರಾಕಾರ ಎಂದು ಬಣ್ಣಿಸಿದರೆ ಒಮ್ಮೆ ಸದ್ಗುಣ ಸಾಕರ ರೂಪ ಎಂದು ಭಾವಿಸುತ್ತಾಳೆ. ಆಧ್ಯಾತ್ಮ ಸಾಧನೆಗೆ ಗಂಡು-ಹೆಣ್ಣು ಮೇಲು-ಕೀಳು ಎಂಬ ಭಾವವಿರಬಾರದು ಎಂದು ಸಾರಿದ ಮೀರ ಕೃಷ್ಣನನ್ನು ತನ್ನ ಪತಿಯನ್ನಾಗಿ ಭಾವಿಸುತ್ತಾಳೆ. ಅಕ್ಕನದೂ ಕೂಡ ಇದೇ ರೀತಿಯ ಪ್ರೇಮ ಮಾರ್ಗ.

ಆಂಡಾಳದ್ದು ಭಕ್ತಿಪ್ರಧಾನವಾದ ದ್ವೈತ ಮಾರ್ಗ. ಪರಮಾತ್ಮನನ್ನೇ ಒಡೆಯ ಎಂದು ನಂಬಿ ತಾನು ಆತನ ಸೇವಕಿ ಎಂದು ಭಾವಿಸಿದವಳು. ಮಹಾರಾಷ್ಟ್ರದ ಬಹೀನಾಬಾಯಿ ಕೂಡ ಇದೇ ರೀತಿಯ ಮನೋಭಾವನೆಯನ್ನು ಹೊಂದಿದ್ದವಳು. ಕಾರಿಕಾಲಮ್ಮ ಕೂಡ ಭಗವಂತನನ್ನೇ ಒಡೆಯ ಆಶ್ರಯದಾತ ಎಂದು ನಂಬಿ ಪೂಜಿಸುತ್ತಿದ್ದಳು.

ಇನ್ನು ಅಕ್ಕನದು ಭಕ್ತಿ ಪ್ರಧಾನವಾದ ಪ್ರೇಮಮಾರ್ಗ. ಚೆನ್ನಮಲ್ಲಿಕಾರ್ಜುನನ್ನೇ ಗಂಡನನ್ನಾಗಿ ಸ್ವೀಕರಿಸುವುದರ ಮೂಲಕ

---

೧೯. ವಿಶ್ವದ ಸಂತ ಮಹಿಳೆಯರು - ಬಿ.ನಂ. ಚಂದ್ರಯ್ಯ - ಪುಟ - ೫೫

ಲೌಕಿಕದ ಸುಖ ಸಂಪತ್ತೆಲ್ಲವನ್ನೂ ತಿರಸ್ಕರಿಸುವ, ತನ್ನಿನಿಯನಲ್ಲಿ ಒಂದಾಗುವ ಅದ್ವೈತ ಮಾರ್ಗ. ಅದ್ವೈತ ಎಂದರೆ ಚೆನ್ನಮಲ್ಲಿಕಾರ್ಜುನನಲ್ಲಿ ಅಕ್ಕ ಒಂದಾಗುವುದು ಎನ್ನುವುದಕ್ಕಿಂತ ಅಕ್ಕ ಪ್ರಕೃತಿ ಹಾಗೂ ತನ್ನಲ್ಲಿ ಚೆನ್ನಮಲ್ಲಿಕಾರ್ಜುನನ ಇರುವಿಕೆಯನ್ನು ಗುರುತಿಸುತ್ತಾಳೆ. ಅಕ್ಕ ಮೀರಾಳಂತೆ ಪ್ರಭುತ್ವವನ್ನು ವಿರೋಧಿಸಿದರೂ ಕೂಡ ಸಾಧನೆಯ ಹಾದಿಯಲ್ಲಿ ಅವಳಿಗಿಂತ ಒಂದು ಹೆಜ್ಜೆ ಮುಂದಿದ್ದಾಳೆ. ಸಾಮಾಜಿಕ ವ್ಯವಸ್ಥೆಗೆ ಅವಳ ಪ್ರತಿರೋಧ ಎಷ್ಟರಮಟ್ಟಿನದು ಎಂದರೆ ಸಾಮಾಜಿಕ ಸಂಸ್ಕೃತಿಯ ಪ್ರಮುಖ ಅಂಗವಾದ ವಸ್ತ್ರವನ್ನು ನಿರಾಕರಿಸುವುದರ ಮೂಲಕ ಸಮಾಜದ ಎಲ್ಲ ಕಟ್ಟುಪಾಡು, ರೀತಿ ನೀತಿಗಳನ್ನು ಮೀರಿ ನಿಲ್ಲುತ್ತಾಳೆ. ಅವಳ ದಿಗಂಬರತ್ವ ಪ್ರಭುತ್ವ ಮತ್ತು ಪುರುಷ ಪ್ರಧಾನ ವ್ಯವಸ್ಥೆಗೆ ಹಾಕಿದ ಬಹುದೊಡ್ಡ ಸವಾಲಾಗಿದೆ. ಅಕ್ಕನ ಈ ದೃಢತೆ, ಧೈರ್ಯ, ಆತ್ಮವಿಶ್ವಾಸ, ಸ್ಥಿರ ಮನೋಭಾವ ಸಮಾಜವನ್ನು ಎದುರಿಸುವ ಬಗೆ ಅವಳನ್ನು ಎಲ್ಲರಿಗಿಂತ ಭಿನ್ನವೆಂದು ಗುರುತಿಸಲು ಕಾರಣವಾಗಿವೆ.

## ಭಿನ್ನತೆ ಮತ್ತು ವಿಶೇಷತೆ

ಈ ಎಲ್ಲಾ ಸಾಧಕಿಯರ ಜೀವನ, ಆಧ್ಯಾತ್ಮ ಸಾಧನೆಯ ಹಾದಿಯಲ್ಲಿ ಸ್ವಲ್ಪಮಟ್ಟಿನ ಸಾಮ್ಯತೆ ಇದ್ದರೂ ಕೂಡ ಅಕ್ಕನ ವ್ಯಕ್ತಿತ್ವ ಇವರೆಲ್ಲರಿಗಿಂತ ಅನನ್ಯವಾದುದ್ದೆಂದು ಗುರುತಿಸುತ್ತವೆ. ಏಕೆಂದರೆ ಅವಳ ಮಧುರ ಭಕ್ತಿ, ಪ್ರಭುತ್ವದ ವಿರುದ್ಧ ಸಿಡಿದೆದ್ದ ಬಗೆ, ಸಾಮಾಜಿಕ ವ್ಯವಸ್ಥೆಗೆ ಪ್ರತಿರೋಧ ಒಡ್ಡಿದ ರೀತಿ, ಆಧ್ಯಾತ್ಮ ಸಾಧನೆಯ ಹಾದಿ, ಚೆನ್ನಮಲ್ಲಿಕಾರ್ಜುನನನ್ನು ತನ್ನಲ್ಲಿ ಒಂದಾಗಿಸಿಕೊಂಡ ವಿಧಾನ. ಅವಳ ವ್ಯಕ್ತಿತ್ವ ವಿಶೇಷತೆಗೆ ಕಾರಣವಾಗಿದೆ. ಮೀರಾ, ರಾಬಿಯಾ, ಅಕ್ಕ ಮೂವರೂ ಪ್ರಭುತ್ವದ ವಿರುದ್ಧ ಸಿಡಿದೆದ್ದವರಾದರೂ ಕೂಡ ಅಕ್ಕನಲ್ಲಿನ ತೀವ್ರ ಪ್ರತಿರೋಧ ಇವರಲ್ಲಿ ಕಂಡುಬರುವುದಿಲ್ಲ. ರಾಬಿಯಾ ಗೌವರ್ನರ್‌ನನ್ನು ವಿವಾಹವಾಗಲು ನಿರಾಕರಿಸಿದಾಗ ಅವನು ರಾಬಿಯಾಳ ಆಧ್ಯಾತ್ಮ ಸಾಧನೆಯನ್ನು ಮೆಚ್ಚಿ ಅವಳನ್ನು ಗೌರವಿಸುತ್ತಾನೆ. ಈ ಸಂದರ್ಭ ಅಕ್ಕನ ವಿವಾಹ ಸಂದರ್ಭವನ್ನು ಹೋಲುತ್ತದೆಯಾದರೂ ಅಕ್ಕನಂತೆ ರಾಬಿಯಾ ಸಂಘರ್ಷಕ್ಕೆ ಸಿಕ್ಕಿಕೊಳ್ಳುವುದಿಲ್ಲ.

ಮೀರಾ ರಾಜಪ್ರಭುತ್ವವನ್ನು ವಿರೋಧಿಸಿದ್ದು ಗಂಡನ ಮರಣದ ನಂತರ ಅತ್ತೆ ಮತ್ತು ನಾದಿನಿಯರ ತೀವ್ರವಾದ ಹಿಂಸೆ, ನಿಂದನೆಯ ಪರಿಣಾಮವಾಗಿ. ಮೀರಾ ರಾಜಪ್ರಭುತ್ವದಲ್ಲಿದ್ದು ಅದರ ಸುಖವನ್ನನುಭವಿಸಿದವಳು. ಅವಳ ಸಂಸಾರ ಪರಿತ್ಯಾಗಕ್ಕೆ ಕಾರಣ ತನ್ನ ನಿಕಟವರ್ತಿಗಳ ಸಾವು ಮತ್ತು ಮನೆಯವರಿಂದ ಉಂಟಾದ ಸಹಿಸಲಾರದ ಹಿಂಸೆ. ಇದನ್ನು ಗಮನಿಸಿದಾಗ ಮೀರಾ ಲೌಕಿಕ ಸುಖವನ್ನನುಭವಿಸಿ ಗಂಡನ ಸಾವಿನಿಂದ ಉಂಟಾದ ಆಘಾತದಿಂದ ಆಧ್ಯಾತ್ಮದ ಕಡೆ ಚಲಿಸಿದವಳು. ಬಾಲ್ಯದಿಂದಲೂ ಅವಳಿಗೆ ಗಿರಿಧರನ ಬಗೆಗೆ ಅಪಾರವಾದ ಭಕ್ತಿಯಿತ್ತಾದರೂ ಅಕ್ಕನಂತೆ ಅವಳದು ಮೂಲತಃ ಪ್ರಭುತ್ವ ವಿರೋಧಿ ಮನೋಭಾವನೆಯಲ್ಲ. ಅಕ್ಕನ ಆಧ್ಯಾತ್ಮ ಸಾಧನೆಗೆ ತನ್ನದೇ ಆದ ವಿಶಿಷ್ಟ ತಾತ್ವಿಕ ಮಾರ್ಗವಿದೆ. ಅವಳು ತಾನು ನಂಬಿದ ಸತ್ಯ ಶೋಧನೆಗೆ ಹಗಲಿರುಳು ಶ್ರಮಿಸಿದವಳು. ಅಕ್ಕನ ಪ್ರತಿಭಟನೆ ಸಾಮಾಜಿಕ ವ್ಯವಸ್ಥೆ ವಿರೋಧದದ್ದಾದರೆ, ಮೀರಾಳದ್ದು ಕುಟುಂಬ ವ್ಯವಸ್ಥೆಯ ವಿರುದ್ದದ್ದು.

ಕಾಶ್ಮೀರದ ಲಲ್ಲೇಶ್ವರಿ ಬಾಲ್ಯದಲ್ಲಿಯೇ ವಿವಾಹ ಬಂಧನಕ್ಕೆ ಒಳಗಾದವಳು. ಅಕ್ಕನಂತೆ ವೈರಾಗ್ಯದ ಜೀವನವನ್ನು ನಡೆಸಿದರೂ ಕೂಡ ಅದು ವಿವಾಹ ನಂತರ ಅವಳ ಗಂಡ ಮತ್ತು ಅತ್ತೆ ಮನೆಯವರ ನಡವಳಿಕೆಯಿಂದ ರೂಪುಗೊಂಡಿದ್ದು. "ಸಾಹಿತ್ಯ ಸಾಧನೆಯನ್ನು ಗಮನಿಸಿದಾಗ ಅಕ್ಕನ ಸಾಹಿತ್ಯ ಲಲ್ಲೇಶ್ವರಿಗಿಂತ ಭಾವಪೂರ್ಣವಾಗಿ, ಸೌಂದರ್ಯ ಯುತವಾಗಿ ಕಾಣುತ್ತದೆ" ಎಂಬ ಮಾತು ಅರ್ಥಪೂರ್ಣವಾದದ್ದು. ಶಾಂತ ಇಮ್ರಾಪುರರವರು ಅಕ್ಕನ ಸಾಹಿತ್ಯವನ್ನು ಕುರಿತಂತೆ ಈ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ, "ನೀರಸವಾದ ಆಧ್ಯಾತ್ಮ ವಿಚಾರಗಳನ್ನು ರಸಪೂರ್ಣವಾಗಿ ವಿವೇಚಿಸುವಲ್ಲಿ ಲಲ್ಲೇಶ್ವರಿಗಿಂತ

ಮಹಾದೇವಿಯಕ್ಕ ಯಶಸ್ವಿಯಾದಳೆಂದರೆ ಅತಿಶಯವೇನಲ್ಲ. ಸೃಷ್ಟಿಯ ವಚನದಂತಹ ಶಾಸ್ತ್ರೀಯ ಸಾಹಿತ್ಯವನ್ನು ರಚಿಸಿದ ಅಕ್ಕ ಧರ್ಮ ಜಿಜ್ಞಾಸುವಾಗಿದ್ದಾಳೆ. ಈ ದೃಷ್ಟಿಯಿಂದ ಮಹಾದೇವಿಯಕ್ಕನ ಹಿರಿಮೆ ಅಪೂರ್ವವಾದದ್ದು"[೨೦] ಎಂಬ ಮಾತು ಅಕ್ಕನ ಸಾಹಿತ್ಯ ಸೃಷ್ಟಿಯ ಮಹತ್ವವನ್ನು ತಿಳಿಸುತ್ತದೆ.

ತಮಿಳುನಾಡಿನ ಆಂಡಾಳ ಅಕ್ಕನಂತೆ ಭಗವಂತನಲ್ಲಿ ಸತಿ – ಪತಿ – ಭಾವವನ್ನು ಹೊಂದಿದ್ದಳು. ಆಕೆಯ ಬಯಕೆಯಂತೆ ರಂಗನಾಥನೊಂದಿಗಿನ ವಿವಾಹವನ್ನು ಅವಳ ತಂದೆಯೇ ಮುಂದೆ ನಿಂತು ಮಾಡಿಸುವುದು. ರಂಗನಾಥನೊಂದಿಗಿನ ಮಧುರಭಕ್ತಿ, ವಿವಾಹವಾಗಿ ಭಗವಂತನೊಂದಿಗೆ ಒಂದಾಗುವ ವಿಧಾನ ಅಕ್ಕನ ಜೀವನವನ್ನು ಹೋಲುತ್ತವೆಯಾದರೂ ಆಂಡಾಳ ಅಕ್ಕನಂತೆ ಸಂಕಷ್ಟದ ಪರಿಸ್ಥಿತಿಗೆ ಸಿಲುಕಿದವಳಲ್ಲ. ಸಮಾಜದಿಂದ ತೀವ್ರ ಪ್ರತಿರೋಧವನ್ನು ಎದುರಿಸಿದವಳಲ್ಲ. ಅವಳ ಬಯಕೆಗಳೆಲ್ಲ ಸರಾಗವಾಗಿ ನಡೆದುದ್ದರಿಂದ ಅಕ್ಕನ ರೀತಿಯ ಸಮಾಜ ವಿರುದ್ಧದ ತೀವ್ರವಾದ ಪ್ರತಿಭಟನೆ ಆಂಡಾಳಲ್ಲಿ ಕಂಡುಬರುವುದಿಲ್ಲ. ಅಕ್ಕ ತನ್ನ ಸಮಾಜವನ್ನು ಎದುರಿಸಿದ ಬಗೆ, ಸೆಟೆದು ನಿಲ್ಲುವ ಕ್ರಮ, ಸಮಸ್ಯೆಗಳ ನಡುವೆಯೂ ಮುನ್ನುಗ್ಗುವ ಮನೋಭಾವದಿಂದ ಇವಳಿಗಿಂತ ಭಿನ್ನವಾಗಿದ್ದಾಳೆ.

ಬಹಿನಾಬಾಯಿ ಮತ್ತು ಕಾರಿಕಾಲಮ್ಮೆಯರ ಜೀವನವನ್ನು ಗಮನಿಸಿದಾಗ ಇವರೂ ಕೂಡ ವಿವಾಹ ಬಂಧನಕ್ಕೆ ಒಳಗಾದವರು. ಬಹಿನಾಳಿಗೆ ಆಧ್ಯಾತ್ಮ ಸಾಧನೆಯನ್ನು ವಿರೋಧಿಸುವ ಪತಿ ಇದ್ದರೆ, ಕಾರಿಕಾಲಮ್ಮ ಪತಿ ಸೇವೆಯಿಂದ ಆದರ್ಶಸತಿ ಎಂದು ಬಿರುದು ಪಡೆದವಳು. ಆಧ್ಯಾತ್ಮ ಸಾಧನೆ ಗಗನ ಕುಸುಮವಾಗಿದ್ದ ಕಾಲದಲ್ಲಿ ಅದರತ್ತ ಮುಖ ಮಾಡಿದವಳು ಕಾರಿಕಾಲಮ್ಮ. ಈ ದೃಷ್ಟಿಯಿಂದ ಇವಳು ಅತ್ಯಂತ ಪ್ರಮುಖವಾಗುತ್ತಾಳೆ.

ಈ ಎಲ್ಲಾ ಮಹಿಳೆಯರ ಜೀವನ ಮತ್ತು ಸಾಧನೆಯನ್ನು ಒಟ್ಟಾರೆಯಾಗಿ ಗಮನಿಸಿದಾಗ ತಮಿಳುನಾಡಿನ ಆಂಡಾಳ ಮತ್ತು ಬಾಗ್ದಾದಿನ ರಾಬಿಯಾ ಉಳಿದಂತೆ ಮಿಕ್ಕವರೆಲ್ಲಾ ಕೂಡ ವಿವಾಹ ಬಂಧನಕ್ಕೆ ಒಳಗಾಗಿ ಅದರಿಂದ ಹೊರಬರಲು ಮುಂದಾದವರು.ಇವರ ಮತ್ತೊಂದು ವಿಶೇಷತೆಯೆಂದರೆ ಎಲ್ಲರೂ ಕೂಡ ಭಗವಂತನಲ್ಲಿ ಒಂದಾಗುವ ಮನೋಭಾವವನ್ನು ಹೊಂದಿದ್ದವರು. ಕೆಲವರದು ಸತಿ– ಪತಿ ಭಾವದ ಪ್ರೇಮಭಕ್ತಿಯಾದರೆ ಮತ್ತೆ ಕೆಲವರದು ಸೇವ್ಯ–ಸೇವಕ ಭಾವದ ಆಧ್ಯಾತ್ಮ ಭಕ್ತಿ. ಈ ಎಲ್ಲಾ ಸಾಧಕಿಯರೂ ಕೂಡ ತಮ್ಮ ಅನುಭಾವದ ಅಂತರಾಳವನ್ನು ಬಿಚ್ಚಿಟ್ಟುಕೊಂಡಿದ್ದು ಸಾಹಿತ್ಯ ರಚನೆಯ ಮೂಲಕ. ಈ ರೀತಿ ಎಲ್ಲಾ ಸಂತ ಮಹಿಳೆಯರಲ್ಲಿ ಹಲವು ಸಾಮಾನ್ಯ ಅಂಶಗಳಿದ್ದರೂ ಕೂಡ ಅಕ್ಕ ಅವರೆಲ್ಲರಿಗಿಂತ ಆಧ್ಯಾತ್ಮ ಹಾದಿಯಲ್ಲಿ, ಸಾಹಿತ್ಯ ರಚನೆಯಲ್ಲಿ, ಸಮಾಜವನ್ನು ಎದುರಿಸುವ ಬಗೆಯಲ್ಲಿ ತನ್ನದೇ ಆದ ವಿಭಿನ್ನ ಮಾರ್ಗವನ್ನು ರೂಪಿಸಿಕೊಂಡಿದ್ದಾಳೆ. ಸಮಾಜದ ಎಲ್ಲಾ ಕಟ್ಟುಪಾಡುಗಳನ್ನು ಮುರಿದು ಕಟ್ಟುವ ಮನೋಭಾವ ಅಕ್ಕನದು. ಈ ದೃಷ್ಟಿಯಿಂದ ಅಕ್ಕ ಈ ಎಲ್ಲಾ ಮಹಿಳಾ ಸಾಧಕಿಯರಿಗಿಂತ ಒಂದು ಹೆಜ್ಜೆ ಮುಂದಿದ್ದಾಳೆ ಎನಿಸುತ್ತದೆ.

---

೨೦. ಧರ್ಮ ಮಹಿಳೆ ಮತ್ತು ಸಮಾಜ – ಶಾಂತ ಇಮ್ರಾಪುರ – ಪುಟ – ೧೦೫

# ೬
# ವಚನಕಾರರಿಗೆ ಅಕ್ಕ ಎದುರಾದ ಬಗೆ

ಮಹಾದೇವಿಯಕ್ಕನ ಬದುಕು, ಸಾಹಿತ್ಯ, ಸಾಧನೆ ಎಲ್ಲವೂ ಅನನ್ಯ ಸಂಸ್ಕೃತಿಯ ಪೂರ್ವಪೀಠಿಕೆ ಎಂದೆನಿಸುತ್ತದೆ. ಅಕ್ಕ ತನ್ನ ಬದುಕಿನ ಮೂಲಕ ಸಾಂಸ್ಕೃತಿಕ ಸಮಾಜಕ್ಕೆ ಬಹುದೊಡ್ಡ ಸವಾಲಾಗಿ ನಿಲ್ಲುತ್ತಾಳೆ. ಪ್ರಭುತ್ವ ಪ್ರಧಾನ, ಪುರುಷ ಪ್ರಧಾನ, ಜಾತಿ ಪ್ರಧಾನ ವ್ಯವಸ್ಥೆ ಸಮಾಜದ ಅಡಿಪಾಯವಾಗಿದ್ದ ಸಂದರ್ಭದಲ್ಲಿ ಅವುಗಳ ಮೂಲ ಬೇರನ್ನು ಕಿತ್ತೊಗೆಯುವ ಪ್ರಯತ್ನವನ್ನು ತನ್ನ ಜೀವನ ವಿಧಾನದ ಮೂಲಕವೇ ಮಾಡಿ ತೋರಿಸುತ್ತಾಳೆ. ಅವಳ ವಚನಗಳಿಂದ ವ್ಯಕ್ತವಾಗದ ಎಷ್ಟೋ ಸಂಗತಿಗಳು, ಹೋರಾಟದ ಮಾದರಿಗಳು, ಬದುಕಿನ ರೀತಿಯಿಂದ ತಿಳಿದುಬರುತ್ತದೆ. ಅಕ್ಕ ಪುರುಷ ಪ್ರಧಾನ ವ್ಯವಸ್ಥೆಯನ್ನು ವಿರೋಧಿಸುವ ಜೊತೆ ಜೊತೆಯಲ್ಲಿಯೇ ಹೆಣ್ಣು ಕೂಡ ಸ್ವತಂತ್ರವಾಗಿ ಸಮರ್ಥ ಜೀವನ ನಡೆಸಲು ಸಾಧ್ಯ ಎಂಬ ಅಂಶವನ್ನು ಸಾಬೀತುಪಡಿಸಿದಳು. ತನ್ನ ಜೀವನದಲ್ಲಿ ಎದುರಿಸಿದ ಸಮಸ್ಯೆಗಳು, ಅನುಭವಿಸಿದ ನೋವುಗಳು ಅಪಾರ. ಅವೆಲ್ಲಕ್ಕೂ ಕೂಡ ಸೂಕ್ತ ರೀತಿಯಲ್ಲಿ ಪರಿಹಾರ ಕಂಡುಕೊಳ್ಳುವ ಅಕ್ಕ ತನ್ನನ್ನು ನಿಂದಿಸುವವರಿಗೆ ಸಮರ್ಪಕ ಉತ್ತರವನ್ನು ನೀಡುವ ಮೂಲಕ ತನ್ನ ಜೀವನ ವಿಧಾನವನ್ನು ಸಮರ್ಥಿಸಿಕೊಳ್ಳುತ್ತಾಳೆ. ತಿಳಿದೋ ತಿಳಿಯದೆಯೋ ತನ್ನನ್ನು ಪ್ರಶ್ನಿಸಿದ, ಪರೀಕ್ಷಿಸಿದ ವ್ಯಕ್ತಿಗಳಿಗೆ ಸವಾಲಾಗಿ ನಿಂತು ಎಲ್ಲಾ ವರ್ಗದ ಜನರಿಂದ ಮನನ್ನಣೆಗೆ ಪಾತ್ರಳಾಗುತ್ತಾಳೆ. ಈ ಹಿನ್ನೆಲೆಯಲ್ಲಿ ಅಕ್ಕ ವಚನಕಾರರಿಗೆ ಎದುರಾದ ಬಗೆ ವಿಶಿಷ್ಟ ರೀತಿಯದ್ದಾಗಿದೆ.

ಕೌಶಿಕನ ಸಂಬಂಧದಿಂದ ಪರಿತ್ಯಕ್ತಳಾದ ಅಕ್ಕ ಬಸವಣ್ಣನ ದರ್ಶನಕ್ಕಾಗಿ ಕಲ್ಯಾಣಕ್ಕೆ ಬರುತ್ತಾಳೆ. ಅಲ್ಲಿ ತನ್ನನ್ನು ಪರೀಕ್ಷಿಸಲು ಪ್ರಯತ್ನಿಸಿದ ಕಿನ್ನರಿ ಬೊಮ್ಮಯ್ಯ ಹಾಗೂ ಅಲ್ಲಮ ಪ್ರಭುವಿಗೆ ಅವಳು ಎದುರಾದ ಬಗೆ ಪುರುಷ ಪ್ರಧಾನ ತಾತ್ವಿಕ, ಬೌದ್ಧಿಕ ಆಲೋಚನೆಗೆ ಒಡ್ಡಿದ ಬಹುದೊಡ್ಡ ಸವಾಲಾಗಿದೆ. ಮಹಾಜ್ಞಾನಿ ಅಲ್ಲಮ ಪ್ರಭುವಿನೊಂದಿಗಿನ ಚರ್ಚೆಗೆ ಮುಂದಾಗುವ ಅಕ್ಕ ಚಿಂತನೆ ಆಲೋಚನೆಯಲ್ಲಿ ಹೆಣ್ಣುಗಂಡಿನ ಸರಿಸಮಾನವಾಗಿ ನಿಲ್ಲಬಲ್ಲಳು ಎಂಬ ಅಂಶವನ್ನು

ಎತ್ತಿ ಹಿಡಿಯುವ ಜೊತೆಗೆ ಅನೇಕ ವಚನಕಾರರಿಂದ ಹೊಗಳಿಕೆಗೆ ಪಾತ್ರಳಾಗುತ್ತಾಳೆ. ಈ ಅಂಶ ಕೂಡ ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಅವಳು ಸಾರಿದ ಪ್ರತಿಭಟನೆಯ ಒಂದು ಮಾದರಿಯೇ ಆಗಿದೆ. ಅಕ್ಕ ವಚನಕಾರ್ತಿಯರಿಗೆ ಎದುರಾದ ಬಗೆಯನ್ನು ಎರಡು ರೀತಿಯಲ್ಲಿ ಗುರುತಿಸಬಹುದು.

★ ಅನುಭಾವಿಗಳೊಂದಿಗೆ ಚರ್ಚೆಗೆ ಮುಂದಾಗಿ ಅವರ ಜ್ಞಾನಕ್ಕೆ ಸವಾಲಾದ ಬಗೆ.

★ ವಿವಿಧ ವಚನಕಾರರು ತಮ್ಮ ವಚನಗಳಲ್ಲಿ ಅಕ್ಕನ ಬಗೆಗೆ ವ್ಯಕ್ತಪಡಿಸಿರುವ ಅಭಿಪ್ರಾಯಗಳು.

ಈ ಅಂಶಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಮೊದಲನೆಯದರಲ್ಲಿ ಪ್ರಮುಖವಾಗಿ ಅಕ್ಕ ಕಿನ್ನರಿ ಬೊಮ್ಮಯ್ಯಾ ಮತ್ತು ಅಲ್ಲಮ ಪ್ರಭುವಿನ ಪರೀಕ್ಷೆಗೆ ಒಳಗಾದ ಬಗೆಯನ್ನು ಗಮನಿಸಬಹುದು. ಕಲ್ಯಾಣವನ್ನು ಪ್ರವೇಶಿಸಿದ ಅಕ್ಕನನ್ನು ಪ್ರಭುವಿನ ಅಪ್ಪಣೆಯಂತೆ ಪರೀಕ್ಷಿಸಲು ಬಂದ ಕಿನ್ನರಿ ಬೊಮ್ಮಯ್ಯ ಅವಳ ವೈರಾಗ್ಯ, ಕಾಯದ ಬಗೆಗಿನ ನಿರಾಸಕ್ತಿ, ದಿಗಂಬರತ್ವ ಮುಂತಾದ ವಿಷಯಗಳನ್ನು ಕುರಿತಂತೆ ಅವಳನ್ನು ಪರೀಕ್ಷಿಸಲು ಮುಂದಾಗುತ್ತಾನೆ.

**ಕಾಯದಲ್ಲಿ ಕಳವಳವಿರಲು ಪ್ರಾಣದಲ್ಲಿ ಮಾಯೆ ಇರಲು**
**ಇದೇತರ ಮನ? ಇದೇತರ ನಿರ್ವಾಣ? ಮಹಾಲಿಂಗ**
**ತ್ರಿಪುರಾಂತಕ ನಿನ್ನ ಸಂಸಾರಿ ಎಂಬನಲ್ಲದೆ**
**ಸಜ್ಜನೆಯೆಂದು ಕೈವಿಡಿದನಲ್ಲ ಕೇಳಾ ಮರುಳೆ** ೧

ಎಂದು ಕಟುವಾಗಿ ಅವಳ ವ್ಯಕ್ತಿತ್ವವನ್ನು ಜರಿಯುತ್ತಾನೆ. ಅದಕ್ಕೆ ಅವಳು ನೀಡಿದ ಉತ್ತರ ಅತ್ಯಂತ ಮಹತ್ವದ್ದಾಗಿವೆ.

**ಬಟ್ಟಹ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣಾ,**
**ಅಣ್ಣಾ ನಾನು ಹೆಂಗೂಸಲ್ಲ, ಅಣ್ಣಾ ನಾನು ಸೂಳೆಯಲ್ಲ,**
**ಅಣ್ಣಾ ಮತ್ತೆ ನನ್ನ ಕಂಡು ಆರೆಂದು ಬಂದಿರಣ್ಣಾ?**
**ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪರಪುರುಷನು**
**ನಮಗಾಗದ ಮೋರೆ ನೋಡಣ್ಣಾ!** ೨

ಎಂದು ಗಂಡಸರು ಹೆಣ್ಣನ್ನು ನೋಡುವ ದೃಷ್ಟಿಕೋನ ಮತ್ತು ಅದರ ಬಗೆಗೆ ತನಗೆ ಯಾವುದೇ ರೀತಿಯ ಆಸಕ್ತಿ ಇಲ್ಲದಿರುವುದನ್ನು ತಿಳಿಸುತ್ತಾಳೆ. ಇದು ಅಕ್ಕ ತನ್ನ ದೇಹದ ಬಗೆಗೆ ತಳೆದ ವೈರಾಗ್ಯದ ಸ್ಥಿತಿಯನ್ನು ಸೂಚಿಸುತ್ತದೆ. ಇಷ್ಟಕ್ಕೆ ಸುಮ್ಮನಾಗದ ಕಿನ್ನರಿ ಬೊಮ್ಮಯ್ಯ ಅವಳ ದೇಹದ ಬಗೆಗೆ ವಾಮ್ಯೋಹವನ್ನು ವ್ಯಕ್ತಪಡಿಸುವುದರ ಮೂಲಕ ಪರೀಕ್ಷೆಗೆ

---

೧. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೭೮

೨. ಶಿವ ಶರಣೆಯರ ವಚನ ಸಂಪುಟ ಭಾಗ ೫ - ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಪ್ರಕಟಣೆ, ವಚನ ೨೩೯

೩. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೭೮

ಮುಂದಾಗುತ್ತಾನೆ. ಆದರೆ ಇದಾವುದರಿಂದಲೂ ಕೂಡ ಅಕ್ಕನ ಮನಸ್ಸಿನಲ್ಲಾಗಲೀ, ದೇಹದಲ್ಲಾಗಲೀ, ಯಾವುದೇ ರೀತಿಯ ವಿಚಲನೆ ಕಂಡುಬರದಿದ್ದಾಗ ಅವಳ ವೈರಾಗ್ಯದ ಸ್ಥಿತಿಯನ್ನು ಈ ರೀತಿ ವ್ಯಕ್ತಪಡಿಸುತ್ತಾನೆ

ಮಸ್ತಕವ ಮುಟ್ಟಿ ನೋಡಿದರೆ ಮನೋಹರನುಳುಮೆ
ಕಾಣಬಂದಿತ್ತು ಮುಖಕಮಲವ ಮುಟ್ಟಿ ನೋಡಿದರೆ
ಮೂರ್ತಿಯ ಉಳುವು ಕಾಣಬಂದಿತ್ತು, ಕೊರಳ
ಮುಟ್ಟಿ ನೋಡಿದರೆ ಗರಳಧರನಿರವು ಕಾಣಬಂದಿತ್ತು
ತೋಳುಗಳ ಮುಟ್ಟಿ ನೋಡಿದರೆ ಶಿವನಪ್ಪು ಕಾಣಬಂದಿತ್ತು
ಉರಸ್ಥಲವ ಮುಟ್ಟಿ ನೋಡಿದರೆ ಕರಸ್ಥಲದಂಗ
ಕಾಣಬಂದಿತ್ತು ಬಸುರ ಮುಟ್ಟಿ ನೋಡಿದರೆ
ಬ್ರಹ್ಮಾಂಡವಡಗಿ(ತ್ತು) ಕಾಣಬಂದಿತ್ತು
ಗುಹ್ಯವ ಮುಟ್ಟಿ ನೋಡಿದರೆ ಕಾಮದಹನ ಕಾಣಬಂದಿತ್ತು
ಮಹಾಲಿಂಗ ತ್ರಿಪುರಾಂತಕದೇವ ಮಹದೇವಿಯಕ್ಕನ ನಿಲವನರಿಯದೆ ಅಳುಪಿ ಕೆಟ್ಟೆನು.[೩]

ಎಂದು ಅವಳ ದೇಹದಲ್ಲಿ ಯಾವುದೇ ರೀತಿಯ ದೈಹಿಕ ಬಯಕೆಗಳಾಗಲೀ, ಪ್ರಲೋಭನೆಗಳಾಗಲೀ ಇಲ್ಲದಿರುವುದನ್ನು ಗುರುತಿಸಿ ಅವಳ ದೈಹಿಕ ಭಿನ್ನತೆಯ ಸ್ವರೂಪವನ್ನು ತಿಳಿಸುತ್ತಾನೆ. ಅಲ್ಲದೆ ಈ ರೀತಿ ತನ್ನ ದೇಹವನ್ನು ಸಂಪೂರ್ಣ ಲೌಕಿಕಾಸಕ್ತಿಯಿಂದ ಮುಕ್ತವಾಗಿಸಿಕೊಂಡ ಅಕ್ಕನನ್ನು

ಶರಣಾರ್ಥಿ ಶರಣಾರ್ಥಿ ಎಲೆ ತಾಯಿ ನಮ್ಮವ್ವಾ
ಶರಣಾರ್ಥಿ ಶರಣಾರ್ಥಿ ಕರುಣಾಸಾಗರ ನಿಧಿಯೆ
ದಯಾಮೂರ್ತಿ ತಾಯೆ ಶರಣಾರ್ಥಿ ಶರಣಾರ್ಥಿ
ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೂಪಕ
ನೀವು ಬಿಡಿಸಿದಿರಾಗಿ ನಿಮ್ಮ ದಯದಿಂದ ನಾನು
ಹುಲಿನೆಕ್ಕಿ ಬದುಕಿದೆನು ಶರಣಾರ್ಥಿ ಶರಣಾರ್ಥಿ ತಾಯೆ[೪]

ಎಂದು ಹಾಡಿ ಹೊಗಳುತ್ತಾನೆ. ಈ ರೀತಿ ಅಕ್ಕ ತನ್ನನ್ನು ಪರೀಕ್ಷಿಸಲು ಬಂದ ಕಿನ್ನರಿ ಬೊಮ್ಮಯ್ಯನಿಂದಲೇ ಮಹಾಮಹಿಮಳೆಂದು ಹೊಗಳಿಸಿಕೊಳ್ಳುತ್ತಾಳೆ.

ನಂತರ ಕಲ್ಯಾಣವನ್ನು ಪ್ರವೇಶಿಸಿದ ಅಕ್ಕ ಅನುಭವ ಮಂಟಪದಲ್ಲಿ ಅಲ್ಲಮ ಪ್ರಭುವಿನೊಂದಿಗೆ ನೇರ ಮುಖಾಮುಖಿಯಾಗುತ್ತಾಳೆ. ಇಲ್ಲಿ ಇವರಿಬ್ಬರ ನಡುವೆ ನಡೆಯುವ ಚರ್ಚೆ ಮಹಾಭಾರತದ ಯಕ್ಷಪ್ರಶ್ನೆಯ ಪ್ರಸಂಗವನ್ನು ನೆನಪಿಗೆ ತರಿಸುತ್ತದೆಯಾದರೂ ಅಕ್ಕ ಅಲ್ಲಮಪ್ರಭುವಿಗೆ ಎದುರಾದ ಬಗೆ ವಿಶಿಷ್ಟವಾದುದ್ದಾಗಿದೆ. ಮಹಾ ಜ್ಞಾನಿಯಾದ

---

೩. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ - ೭೮

೪. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ - ೭೯

ಅಲ್ಲಮಪ್ರಭು ಅಕ್ಕನ ಭಕ್ತಿ, ವಿರಕ್ತಿ, ಚೆನ್ನಮಲ್ಲಿಕಾರ್ಜುನನನ್ನು ಪತಿಯನ್ನಾಗಿ ಸ್ವೀಕರಿಸಿದ ಬಗೆ ಮುಂತಾದ ವಿಷಯಗಳನ್ನು ಕುರಿತಂತೆ ಪರಿಪರಿಯಾಗಿ ಅವಳನ್ನು ಪರೀಕ್ಷೆಗೆ ಒಡುತ್ತಾನೆ. ಪ್ರಭುವಿನ ಎಲ್ಲಾ ಪ್ರಶ್ನೆಗಳೂ ಸಮರ್ಥವಾಗಿ ಉತ್ತರಿಸುವ ಅಕ್ಕ ತನ್ನ ಧೈರ್ಯ, ಸ್ಥೈರ್ಯ, ಅಚಲ ವಿಶ್ವಾಸ, ದೃಢ ಚಿತ್ತದಿಂದ ಚೆನ್ನಮಲ್ಲಿಕಾರ್ಜುನನೊಂದಿಗೆ ಕೂಡಿಯೇ ತೀರುತ್ತೇನೆಂಬ ಮನೋಭಾವವನ್ನು ವ್ಯಕ್ತಪಡಿಸುತ್ತಾಳೆ. ಪ್ರಭುವಿನ ಪ್ರಶ್ನೆಗೆ ಅವಳು ನೀಡುವ ಪ್ರತಿಯೊಂದು ಉತ್ತರವೂ ಕೂಡ ಅವಳ ಜ್ಞಾನ, ವೈರಾಗ್ಯದ ಹಿರಿಮೆಯನ್ನು ಎತ್ತಿ ಹಿಡಿಯುತ್ತದೆ.

ಉದಮದದಯ ಯಾವನವನೊಳಗೊಂಡು
ಸತಿನೀನು ಇತ್ತಲೇಕೆ ಬಂದೆಯವ್ವಾ?
ಸತಿಯೆಂದರೆ ಮುನಿವರು ಎಮ್ಮ ಶರಣರು
ನಿನ್ನ ಪತಿಯ ಕುರಹ ಹೇಳಿದರೆ ಬಂದು ಕುಳ್ಳಿರು
ಅಲ್ಲದಿರೆ ತೊಲಗು ತಾಯೆ ನಮ್ಮ ಗುಹೇಶ್ವರನ
ಶರಣರ ಸಂಗಸುಖಸನ್ನಿಹಿತವ ಬಯಸುವರೆ
ನಿನ್ನ ಪತಿಯಾರೆಂಬುದ ಹೇಳಾ ಎಲೆ ಅವ್ವಾ ? [೫]

ಎಂದು ಅಕ್ಕನನ್ನು ನಿನ್ನ ಪತಿಯ ಕುರುಹನ್ನು ಹೇಳುವುದಾದರೆ ಇಲ್ಲಿಗೆ ಪ್ರವೇಶ, ಇಲ್ಲದಿದ್ದರೆ ಹೊರಡು ಎಂದು ಕಟುವಾಗಿ ನಿಂದಿಸಿ ನುಡಿದಾಗ ಅಕ್ಕ ಎದೆಗುಂದದೆ ಚೆನ್ನಮಲ್ಲಿಕಾರ್ಜುನನೇ ಎನ್ನ ಪತಿ ಎಂದು ಈಗಾಗಲೇ ನಿಶ್ಚಯಿಸಿಯಾಗಿದೆ. ಅವನನಲ್ಲದೆ ಬೇರೆ ಗಂಡನನ್ನು ತಾನು ಯಾವ ಕಾರಣದಿಂದಲೂ ಒಪ್ಪಲು ಸಾಧ್ಯವಿಲ್ಲವೆಂದು ತಿಳಿಸುತ್ತಾಳೆ. ಅಲ್ಲದೆ ಹರನನ್ನು ತನ್ನ ಗಂಡನನ್ನಾಗಿ ಪಡೆಯಲು ಪಟ್ಟ ಶ್ರಮ, ಇಟ್ಟ ಶ್ರದ್ಧೆ ಎಲ್ಲವನ್ನೂ ವಿವರಿಸಿ ಹೇಳುತ್ತಾಳೆ. ಮದುವೆಯ ಸಾಧ್ಯಾಸಾಧ್ಯತೆಯ ಪ್ರಶ್ನೆ ಎದುರಾದಾಗ ಅಕ್ಕ ಮದುವೆಯ ವಿವರವನ್ನು ಈ ರೀತಿ ವಿವರಿಸುತ್ತಾಳೆ.

ಗುರುವೇ ತೆತ್ತಿಗನಾದ, ಲಿಂಗವೇ ಮದವಳಿಗನಾದ
ನಾನೆ ಮದುವಳಿಗೆಯಾದೆನು ಈ ಭುವನವೆಲ್ಲರಿಯಲು
ಅಸಂಖ್ಯಾತರೆನಗೆ ತಾಯಿತಂದೆಗಳು
ಕೊಟ್ಟರು ಪ್ರಭುವಿನ ಮನೆಗೆ ಸಾದೃಶ್ಯವಪ್ಪ
ವರನ ನೋಡಿ ಇದು ಕಾರಣ ಚೆನ್ನಮಲ್ಲಿಕಾರ್ಜುನ
ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ
ಸಂಬಂಧವಿಲ್ಲವಯ್ಯ ಪ್ರಭುವೆ. [೬]

ಎಂದು ತನ್ನ ಅಲೌಕಿಕ ಸಂಸಾರ ಸಂಬಂಧದ ವಿವರಗಳನ್ನು ಬಿಚ್ಚಿಡುತ್ತಾಳೆ. ಇಷ್ಟಕ್ಕೂ ಸುಮ್ಮನಾಗದ ಪ್ರಭು ಕೌಶಿಕನೊಂದಿಗಿನ ಸಂಬಂಧದ ವಿವರಗಳನ್ನು ಕೆದಕಿ ನೋಡಲು ಪ್ರಯತ್ನಿಸುತ್ತಾನೆ.

೫. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೮೪

೬. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೮೫

ತಪ್ಪು ಹೊರಿಸಿ ಹೊರಟೆನೆಂಬುದು ಸತ್ಯವೆ?
ತನುಸಿರಿಯನಳಿದು ನಿರ್ವಾಣದಲ್ಲಿ ಮನದ
ಭ್ರಾಂತು ನಿಶ್ಚಯವಾಗದು ಕೇಶವೆಂಬ ಸೀರೆಯಿ
ಅಂಗಕ್ಕೆ ಮರೆಯಾಯಿತು ಅಪಮಾನವೆಂತು
ಹರಿಯಿತ್ತು ? ಅದು ಗುಹೇಶ್ವರ ಲಿಂಗಕ್ಕೆ ಸಲ್ಲದ ವೇಷ. [೭]

ಎಂದು ಸೀರೆಯ ಬದಲು ಕೇಶವನ್ನು ಮರೆ ಮಾಡಿಕೊಂಡ ಮೇಲೆ ಮನದ ಅಪಮಾನ ಅಳಿಯಲು ಹೇಗೆ ಸಾಧ್ಯ ಎಂದು ಭಾವಶುದ್ಧವಿರುವವರಿಗೆ ಕೂದಲಿನ ಮರೆಯ ಅವಶ್ಯಕತೆ ಇಲ್ಲ. ಈ ಪರಿಯ ವೇಶ ನಿನ್ನ ಅಂತರಂಗದ ನಾಚಿಕೆ ಬಾಹ್ಯದಲ್ಲಿ ವ್ಯಕ್ತವಾದ ಬಗೆಯನ್ನು ವಿವರಿಸುತ್ತಿದೆ ಎಂದು ಕಟುವಾಗಿ ಅವಳನ್ನು ಕಪಟ ವೇಷಧಾರಿ ಎಂದು ನಿಂದಿಸುತ್ತಾನೆ. ಇಂತಹ ಮಾತುಗಳಿಂದ ಎದೆಗುಂದದ ಅಕ್ಕ ಧೈರ್ಯವಾಗಿ ;

ಫಲ ಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು
ಕಾಮನ ಮುದ್ರೆಯ ಕಂಡು ನಿಮಗೆ ನೋವಾಧಿತ್ತೆಂದು
ಆ ಭಾವದಿಂದ ಮುಚ್ಚಿವೆ ಇದಕೆ ನೋವೇಕೆ?
ಕಾಡದಿರಣ್ಣಾ ಚೆನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ. [೮]

ಕೆಂಡದ ಶವದಂತೆ ಸೂತ್ರ ತಪ್ಪಿದ ಬೊಂಬೆಯಂತೆ
ಜಲವರತ ತಟಾಕದಂತೆ ಬೆಂದನುಲಿಯಂತೆ
ಮತ್ತೆ ಹಿಂದಣ ಹಂಗುಂಟೆ ಅಣ್ಣಾ?
ಚೆನ್ನಮಲ್ಲಿಕಾರ್ಜುನ ಲಿಂಗವೇ ಆಶ್ರಯವಾದವಳಿಗೆ. [೯]

ಎಂದು ತನ್ನ ವಸ್ತ್ರನಿರಾಕರಣ ಕ್ರಮವನ್ನು ಸಮರ್ಥಿಸಿಕೊಳ್ಳುತ್ತಾಳೆ. ಅಲ್ಲದೆ ತಾನು ಎಲ್ಲಾ ರೀತಿಯ ದೈಹಿಕ ಆಸೆ, ಆಕಾಂಕ್ಷೆಗಳನ್ನು ಮೀರಿ ಬಂದಿರುವುದರಿಂದ ಮತ್ತೆ ಅದರ ಬಗೆಗೆ ಚಿಂತಿಸುವ ಮಾತೇ ಇಲ್ಲ ಎಂದು ತನ್ನ ಎಲ್ಲಾ ಕ್ರಿಯೆಗಳನ್ನು ಸಮರ್ಥಿಸಿಕೊಳ್ಳುತ್ತಾಳೆ. ತನ್ನ ಗಂಡನಾದ ಚೆನ್ನಮಲ್ಲಿಕಾರ್ಜುನ ಸಾವು, ಕೇಡು, ಕೋಪ ಎಲ್ಲವನ್ನೂ ಮೀರಿ ನಿಂತವನು ಎಂದು ತನ್ನ ಗಂಡನ ಅಸ್ತಿತ್ವವನ್ನೇ ವಿವರಿಸುತ್ತಾಳೆ. ಆಗ ಪ್ರಭು ಅವಳ ಈ ಬಗೆಯ ದಾಂಪತ್ಯ ಸಾಧ್ಯವಿಲ್ಲವೆಂದು ಹೇಳುತ್ತಾ ''ರೂಹಿಂಗೆ ಕೇಡುಂಟು, ನಿರೂಪಿಂಗೆ ಕೇಡಿಲ್ಲ, ರೂಪು ನಿರೂಪವ ನೊಡಗೂಡುವ ಪರಿಯಂತು ಹೇಳಾ'' ಎಂದು ಇಂದ್ರಿಯ ಭೋಗಾಸಕ್ತಿಯಿಂದ ಕೂಡಿರುವ ದೇಹವನ್ನು ಹೊಂದಿರುವ ಅಕ್ಕ ನಿರ್ದೇಹಿಯಾದ ಚೆನ್ನಮಲ್ಲಿಕಾರ್ಜುನನನ್ನು ಕೂಡುತ್ತೇನೆ ಎಂಬುದು ವಿಸ್ಮಯದ ಸಂಗತಿ ಎಂದು ಅವಳನ್ನು ಮತ್ತಷ್ಟು ಪರೀಕ್ಷಿಸಲು ಮುಂದಾಗುತ್ತಾನೆ.

೭. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೮೫
೮. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೮೬
೯. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೮೭

ಕೂಡಲಿಲ್ಲದ ಘನವ ಕೂಡುವ ಪರಿಯೆಂತವ್ವ?
ಹೇಳಿದರೆ ಅದಕ್ಕದೇ ಕೊರತೆ ಗುಹೇಶ್ವರ ಲಿಂಗವ
ಬೇರು ಮಾಡಿ ಬೆರೆಸುವ ಪರಿಎಂತು ಹೇಳಾ? ೧೦

ಎಂದಾಗ ಅಕ್ಕ ಪ್ರಭುವಿನ ಎಲ್ಲಾ ಪ್ರಶ್ನೆಗಳಿಗೆ ತಾತ್ವಿಕವಾಗಿ ಉತ್ತರಿಸಲು ಪ್ರಯತ್ನಿಸುತ್ತಾಳೆ. ಅವಳು ನೀಡುವ ಉತ್ತರ ಅವಳ ಬೌದ್ಧಿಕ ವಿಕಾಸದ ಕ್ರಮವನ್ನು ನಿರೂಪಿಸುತ್ತದೆ.

ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಹಂಗುಂಟೆ ಅಯ್ಯ?
ದೀಪಕ್ಕ ದೀಪ್ತಿಗೆ ಭೇದ ಉಂಟೆ ಅಯ್ಯ?
ಆತ್ಮಕ್ಕೆ ಅಂಗಕ್ಕೆ ಭೇದ ಉಂಟೆ ಅಯ್ಯ?
ಎನ್ನಂಗವನು ಶ್ರೀ ಗುರು ಮಂತ್ರವ ಮಾಡಿ ತೋರಿದನಾಗಿ
ಸಾವಯವಕ್ಕೆ ನಿರವಯಕ್ಕೆ ಭಿನ್ನವಿಲ್ಲವಯ್ಯ
ಚೆನ್ನಮಲ್ಲಿಕಾರ್ಜುನದೇವರ ಬೆರಿಸಿ ಮತಿಗೆಟ್ಟವಳನೇತಕ್ಕೆ
ನುಡಿಸುವಿರಯ್ಯ ಪ್ರಭುವೇ?

ಅಂಗವ ಲಿಂಗಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು
ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು
ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು
ಅಂಗ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು
ಎನ್ನಕಾಯದ ಸುಖಭೋಗವ ಲಿಂಗವೇ ಭೋಗಿಸುವುದಾಗಿ
ಶರಣ ಸತಿ ಲಿಂಗಪತಿಯಾದೆನು. ೧೧

ಎಂದು ತನ್ನ ಆತ್ಮ ಮತ್ತು ಅಂಗದ ನಡುವೆ ಯಾವುದೇ ರೀತಿಯ ಭೇದವಿರದ ಕಾರಣ ಅಂಗ ಅನಂಗವಾಯಿತ್ತು. ಮನ ಲಯವಾಯಿತ್ತು. ಭಾವ ಬಯಲಾಯಿತ್ತು ಎನ್ನುತ್ತಾಳೆ. ಈ ರೀತಿಯ ಪ್ರಬುದ್ಧತೆಯಿಂದಲೇ ಅವಳು ''ಅಂಗ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು. ಎನ್ನಕಾಯದ ಸುಖ ಭೋಗವ ಲಿಂಗವೇ ಭೋಗಿಸುವುದಾಗಿ ಶರಣ ಸತಿ ಲಿಂಗ ಪತಿಯಾದೆನು' ಎಂದು ತಾನೇ ಸತಿಯಾಗಿ ಲಿಂಗವೇ ಪತಿಯಾದ ಬಗೆಯನ್ನು ವಿವರಿಸುತ್ತಾಳೆ. ಈ ಕಾರಣದಿಂದಲೇ ಅವಳು ಚೆನ್ನಮಲ್ಲಿಕಾರ್ಜುನನೊಂದಿಗೆ ಕೂಡಲು ಸಾಧ್ಯವಾಯಿತು ಎಂದು ಪ್ರಭುವಿಗೆ ವಿವರಿಸಿ ಹೇಳುತ್ತಾಳೆ. ಅಕ್ಕನ ಬೌದ್ಧಿಕ ಪ್ರಬುದ್ಧತೆಯನ್ನು ಮೆಚ್ಚಿದ ಪ್ರಭು. ಅವಳ ಹಿರಿಮೆಯನ್ನು ವಚನಕಾರರೆಲ್ಲರಿಗೆ ಸಮಗ್ರವಾಗಿ ಪರಿಚಯಿಸುವ ಸಲುವಾಗಿ ಜಟಿಲವಾದ ಪ್ರಶ್ನೆಯೊಂದನ್ನು ಮುಂದಿಡುತ್ತಾನೆ.

---

೧೦. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೯೦

೧೧. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೯೦

**ನಾಸತ್ತೆನೆಂದು ಹೆಣ ಕೂಗಿದುದುಂಟೆ**
**ಬಯಚಿಟ್ಟ ಬಯಕೆ ಕರೆದುದುಂಟೆ ?**
**ಹೆಪ್ಪಿಟ್ಟ ಹಾಲು ಸಿಹಿಯಪ್ಪುದೆ ?**
**ಈ ಮಾತು ಒಪ್ಪವಪ್ಪುದೆ ಗುಹೇಶ್ವರ ಲಿಂಗಕ್ಕೆ ?** ೧೨

ಅದಕ್ಕೆ ಅಕ್ಕ, ಸತ್ತ ಹೆಣ ಕೂಗಿದುದುಂಟು, ಬಯಚಿಟ್ಟ ಬಯಕೆ ಕರೆದುದುಂಟು ಹೆಪ್ಪಿಟ್ಟ ಹಾಲು ಸಿಹಿಯಾದುದುಂಟು ಎಂದು ವೈಜ್ಞಾನಿಕವಾಗಿ ಅಸಾಧ್ಯವಾದದ್ದು ಸಾಧ್ಯವಾಗುವ ಬಗೆಯನ್ನು ತಿಳಿಸುತ್ತಾಳೆ.

**ಮರೆದೊರಗಿ ಕನಸ ಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು !**
**ತನ್ನ ಋಣ ನಿಧಾನ ಎದ್ದು ಕರೆಯಿತ್ತು !**
**ಹೆಪ್ಪಿಟ್ಟ ಹಾಲು ಗಟ್ಟಿ ತುಪ್ಪವಾಗಿ ಸಿಹಿಯಾಗಿತ್ತು !**
**ಇದಕ್ಕೆ ತಪ್ಪ ಸಾಧಿಸಲೇಕೆ ಚೆನ್ನಮಲ್ಲಿಕಾರ್ಜುನ**
**ದೇವರ ದೇವನ ಅಣ್ಣಗಳಿರಾ?** ೧೩

ಎಂದು ಇದೇ ರೀತಿ ಕಾಯವುಳ್ಳ ನಾನು ಅಕಾಯನಾದ ಚೆನ್ನಮಲ್ಲಿಕಾರ್ಜುನನ್ನು ಕೂಡಲು ಸಾಧ್ಯ ಎಂಬುದನ್ನು ಸಾಬೀತು ಪಡಿಸುತ್ತಾಳೆ. ಇದರಿಂದ ಅಕ್ಕನ ಮಾನಸಿಕ ವಿಕಾಸ ಬೌದ್ಧಿಕ ಸಾಮರ್ಥ್ಯ, ಜ್ಞಾನದ ಪ್ರಬುದ್ಧತೆ, ಅಚಲ ವಿಶ್ವಾಸ, ದೃಢ ಮನೋಭಾವ ವಚನಕಾರರಿಗೆ ತಿಳಿಯಲು ಸಹಾಯಕವಾಯಿತು. ಒಂದು ಹಂತದಲ್ಲಿ ಅಲ್ಲಮ ಮತ್ತು ಅಕ್ಕನ ನಡುವಿನ ಚರ್ಚೆ ಸ್ತ್ರೀಯರ ಅಭಿವ್ಯಕ್ತಿ ಸ್ವಾತಂತ್ರದ ಪ್ರತೀಕವಾದರೆ ಮತ್ತೊಂದು ಹಂತದಲ್ಲಿ ಅಲ್ಲಮನಂತಹ ಮಹಾಜ್ಞಾನಿಯನ್ನು ಎದುರಿಸುವ ಧೈರ್ಯ ಸ್ಥೈರ್ಯದ ಜೊತೆಗೆ ಅಪಾರ ಜ್ಞಾನವನ್ನು ಹೊಂದಿದ್ದಳು ಎಂಬುದನ್ನು ತಿಳಿಸುತ್ತದೆ. ಒಟ್ಟಾರೆ ಅಕ್ಕನ ವ್ಯಕ್ತಿತ್ವ ಪುರುಷ ಪ್ರಧಾನ ವ್ಯವಸ್ಥೆಯ ಎಲ್ಲಾ ಅಡ್ಡಿ ಆತಂಕಗಳನ್ನು ಮೀರಿ ಸ್ವಪ್ರೇರಣೆಯಿಂದ, ಸ್ವಂತ ಪ್ರತಿಭೆಯಿಂದ ಮೂಡಿ ಬಂದದ್ದಾಗಿದೆ. ಪುರುಷ ಪ್ರಧಾನ ವ್ಯವಸ್ಥೆಯ ಪ್ರತಿಸ್ಪರ್ಧಿಯಾದ ಅಕ್ಕ ಅವರ ನಡತೆಯನ್ನು ವಿರೋಧಿಸುತ್ತಾ, ಅದನ್ನು ತಿದ್ದುವ ಪ್ರಯತ್ನದಲ್ಲಿ ಮುನ್ನಡೆಯುತ್ತಾಳೆ.

ವಚನಕಾರರು ಅಕ್ಕನ ಬಗೆಗೆ ವ್ಯಕ್ತಪಡಿಸಿರುವ ಅನಿಸಿಕೆಗಳ ಆಧಾರದಿಂದ ಅಕ್ಕ ವಚನಕಾರರಿಗೆ ಎದುರಾದ ಮತ್ತೊಂದು ಹಂತವನ್ನು ಗುರುತಿಸಬಹುದು. ಪುರುಷ ಶ್ರೇಷ್ಠ ಸ್ತ್ರೀ ಕನಿಷ್ಠ ಎಂಬ ಸಂದರ್ಭದಲ್ಲಿ ಅಕ್ಕ ಇವರಿಂದ ಹೊಗಳಿಸಿಕೊಂಡದ್ದು ವಿಮರ್ಶೆಗೆ ಒಳಗಾದದ್ದು ವಿಶೇಷದ ಸಂಗತಿ. ಅನೇಕ ವಚನಕಾರರು ತಮ್ಮ ವಚನಗಳಲ್ಲಿ ಅಕ್ಕನ ಜೀವನ ವ್ಯಕ್ತಿತ್ವ, ಸಾಧನೆ, ಸಾಹಿತ್ಯದ ಬಗೆಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಬಸವಣ್ಣ ಚೆನ್ನಬಸವಣ್ಣ ಅಲ್ಲಮ ಪ್ರಭು, ಸಿದ್ಧರಾಮ, ಕಿನ್ನರಿ ಬೊಮ್ಮಯ್ಯ ಮುಂತಾದ ಪ್ರಮುಖ ವಚನಕಾರರು ಅವಳ ಹಿರಿಮೆ ಗರಿಮೆಯನ್ನು ಎತ್ತಿ ಹಿಡಿದಿದ್ದಾರೆ. ಬಸವಣ್ಣನಂತೂ 'ಎನ್ನ ಹೆತ್ತ ತಾಯಿ ಮಹಾ ದೇವಿಯಕ್ಕನ ನಿಲುವು ನೋಡಾ ಪ್ರಭುವೆ' ಎಂದು ಅಕ್ಕನಿಗೆ ಮಹತ್ವದ ಸ್ಥಾನವನ್ನು ನೀಡುತ್ತಾನೆ.

---

೧೨. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ - ೯೦

೧೩. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ - ೯೦

ಹೆಂಗುಸಿನಂಗವ ನೋಡಿರೆ ಪುರಾತನರು
ಬಾಲ ತನದಂಗ ನೋಡಿರೆ ಪುರಾತನರು
ಬ್ರಹ್ಮವನಾಚರಿಸಿ ತನ್ನ ಮರೆದಿಪ್ಪುದ ನೋಡಿರೆ ಲಿಂಗವಂತರು
ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆ ಇಪ್ಪಇರವು
ಕೂಡಲ ಸಂಗಮದೇವರಲ್ಲಿ ನಮ್ಮ ಮಹಾದೇವಿಯಕ್ಕಂಗಾಯಿತ್ತು. [೧೪]

ಎಂದು ಮಹಾದೇವಿಯಕ್ಕನ ಘನತೆಯನ್ನು ಅನುಭವ ಮಂಟಪದ ಸಮುದಾಯಕ್ಕೆ ಪರಿಚಯಿಸುತ್ತಾನೆ.

ಎನ್ನ ಭಕ್ತಿಯ ಶಕ್ತಿಯು ನೀನೆ ಎನ್ನ ಯುಕ್ತಿಯ
ಶಕ್ತಿಯು ನೀನೆ ಎನ್ನ ಮುಕ್ತಿಯ ಶಕ್ತಿಯು ನೀನೆ
ಎನ್ನ ಮಹಾಘನದ ನಿಲುವಿನ ಪ್ರಭೆಯನ್ನುಟ್ಟು
ತಳವೆಳಗಾದ ಸ್ವಯಜ್ಞಾನಿಕೂಡಲ ಸಂಗಯ್ಯನಲ್ಲಿ
ಮಹಾದೇವಿಯಕ್ಕಗಳ ನಿಲವ ಮಡಿವಾಳನಿಂದರಿದು
ಬದುಕಿದೆನಯ್ಯಾ ಪ್ರಭುವೆ. [೧೫]

ಎಂದು ಅಕ್ಕನನ್ನು ಪರೀಕ್ಷಿಸಲು ಬಂದ ಮಡಿವಾಳ ಮಾಚಿದೇವ ಕೂಡ ಅಕ್ಕನ ವ್ಯಕ್ತಿತ್ವಕ್ಕೆ ತಲೆಬಾಗಿದುದನ್ನು ಬಸವಣ್ಣ ಹಿರಿಮೆಯಿಂದ ಪ್ರಭುವಿಗೆ ತಿಳಿಸುತ್ತಾನೆ. ಅಕ್ಕನನ್ನು ಭಕ್ತಿಗೆ, ಯುಕ್ತಿಗೆ, ಮುಕ್ತಿಗೆ ಎಲ್ಲಕ್ಕೂ ಕೂಡ ಶಕ್ತಿ ಸ್ವರೂಪಳಾದವಳು ಎಂದು ಹೇಳುವುದರ ಮೂಲಕ ಹೆಣ್ಣಿಗೆ ಶ್ರೇಷ್ಠತೆಯ ಸ್ಥಾನವನ್ನು ನೀಡುತ್ತಾನೆ.

ಅಕ್ಕನನ್ನು ಪರಿಪರಿಯಾಗಿ ಪರೀಕ್ಷಿಸಿದ ಅಲ್ಲಮ ಪ್ರಭು ಕೂಡ ಅವಳ ವ್ಯಕ್ತಿತ್ವದ ಬಗೆಗೆ ಹಿರಿಮೆ – ಗರಿಮೆಯ ಬಗೆಗೆ ಹಲವು ಮೆಚ್ಚುಗೆಯ ಮಾತನಾಡುತ್ತಾನೆ.

ತನುಗುಣನಾಸ್ತಿಯಾಗಿ ಲಿಂಗಸತಿಯಾದಳು
ಮನಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು
ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ
ಲಿಂಗದಲ್ಲಿ ಸ್ವಯಂ ಲಿಂಗವಾದ ಮಹಾದೇವಿಯಕ್ಕಗಳ
ನಿಲುವಿಂಗೆ ಶರಣೆನುತ್ತಿರ್ದೆನು. [೧೬]

ಎಂದು ಅಕ್ಕ ತನು, ಮನದ ಸ್ವಾಭಾವಿಕ ಗುಣಗಳಿಂದ ಬಿಡುಗಡೆ ಹೊಂದಿ ಸ್ವಯಂ ಲಿಂಗವಾದ ಬಗೆಯನ್ನು ತಿಳಿಸುತ್ತಾನೆ. ಅಲ್ಲದೆ ಇಂತಹ ಮಹಾದೇವಿಯಕ್ಕನ ನಿಲುವಿಗೆ ತಾನೂ ಕೂಡ ಭಕ್ತಿಪೂರ್ವಕವಾಗಿ ವಂದಿಸುತ್ತಾನೆ. ಮತ್ತೊಂದು ವಚನದಲ್ಲಿ

---

೧೪. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೯೫

೧೫. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೧೦೨

೧೬. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೧೦೧

ಅಂಗಯ್ಯ ಲಿಂಗದಲ್ಲಿ ಕಂಗಳ ನೋಟ
ಸ್ವಯವಾದ ಇರವ ನೋಡಾ ತನ್ನ
ಸ್ವಾನುಭಾವದ ಉದಯದಿಂದೆ ತನ್ನನರಿದ
ನಿಜಶಕ್ತಿಯ ನೋಡಾ
ಭಿನ್ನವಿಲ್ಲದಿರುವು ಮನ್ನಣೆಯ ಮಮಕಾರವ
ಮೀರಿದ ಭಾವ ತನ್ನಿಂದ ತಾನಾದಳು, ನಮ್ಮ
ಗುಹೇಶ್ವಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ
ನಿಲುವಿಂಗೆ ನಮೋ ನಮೋ ಎನುತಿರ್ದೆ ಕಾಣಾ ಚನ್ನಬಸವಣ್ಣಾ ೧೭

ಎಂದು ಅಕ್ಕನನ್ನು ಸ್ವಾನುಭವದಿಂದ ತನ್ನನ್ನ ಅರಿತ ನಿಜಶಕ್ತಿ ಎಂದು ವರ್ಣಿಸುತ್ತಾನೆ. ಅಲ್ಲದೆ ಎಲ್ಲಾ ಸಂಬಂಧಗಳ ಮಮಕಾರದಿಂದ ದೂರಾಗಿ ತನ್ನಿಂದ ತಾನಾದ ಅಕ್ಕನ ವ್ಯಕ್ತಿತ್ವಕ್ಕೆ ಅಲ್ಲಮ ವಂದಿಸುವುದಲ್ಲದೆ ಚೆನ್ನಬಸವಣ್ಣ ಅಕ್ಕನ ಬಗೆಗೆ ವ್ಯಕ್ತಪಡಿಸುವ ಗೌರವದ ಭಾವನೆಯನು ವಿವರಿಸಿದ್ದಾನೆ.

ಆದಿಯಲ್ಲ ಅನಾದಿಯಲ್ಲ ನಾಮವಿಲ್ಲ ಸೀಮೆಯಲ್ಲ
ನಿಜಶಕ್ತಿ ಚಿಚ್ಛಕ್ತಿಯಾಯಿತ್ತು ನೋಡಾ
ಅಂತರಂಗದ ಪ್ರಭೆ ಬಹಿರಂಗವೆಲ್ಲ ತಾನೆಯಾಗಿ ಗುಹೇಶ್ವರ ಲಿಂಗದಲ್ಲಿ
ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ
ನಮೋನಮೋ ಎಂಬೆನು ಕಾಣಾ ಚೆನ್ನಬಸವಣ್ಣಾ ೧೮

ಈ ರೀತಿ ಅಕ್ಕ ಸ್ವಂತ ಶಕ್ತಿ – ಸಾಮರ್ಥ್ಯದಿಂದ ತನ್ನ ವ್ಯಕ್ತಿತ್ವವನ್ನು ರೂಪಿಸಿಕೊಂಡ ಬಗೆಯನ್ನು ಈ ವಚನಕಾರರು ಮನೋಜ್ಞವಾಗಿ ವಿವರಿಸಿದ್ದಾರೆ. ಎಂದೆಂದೂ ತಾನು ಬಯಸಿದ ಜೀವನದಿಂದ ವಿಮುಕ್ತಳಾಗದ ಅಕ್ಕನ ಬಗೆಗೆ ಇವರೆಲ್ಲರಿಗೂ ಅತಿಯಾದ ಗೌರವಾಧಾರವಿದೆ.

ಮಹಾಜ್ಞಾನಿಯಾದ ಚೆನ್ನಬಸವಣ್ಣ ಅಕ್ಕನ ವ್ಯಕ್ತಿತ್ವದ ಹಿರಿಮೆಯನ್ನು ತನ್ನ ವಚನದಲ್ಲಿ ಈ ರೀತಿ ವಿವರಿಸಿದ್ದಾನೆ.

ಅಜಕೋಟಿ ವರ್ಷದವರೆಲ್ಲರೂ ಹಿರಿಯರೆ?
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ?
ನಡುಮುರಿದು ಗುಡಗೂರಿ ತಲೆನಡುಗಿ ನರೆತೆರೆಹೆಚ್ಚಿ
ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ
ಅಜ್ಞಾನಿಗಳೆಲ್ಲರೂ ಹಿರಿಯರೆ? ಅನುವರಿದು
ಘನವತಿಳಿದು ಹಿರಿದುಕಿರಿದೆಂಬ ಭೇದವ ಮರೆದು
ಕೂಡಲ ಚೆನ್ನ ಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ
ಹಿರಿಯತನ ನಮ್ಮ ಮಹಾದೇವಿಯಕ್ಕಂಗಾಯಿತ್ತು. ೧೯

---

೧೭. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೯೯

೧೮. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೯೯

೧೯. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ – ೧೦೦

ಎಂದು ವಯಸ್ಸಾದವರನ್ನು ಅನುಭಾವಿಗಳು, ಹಿರಿಯರು ಎಂದು ಕರೆಯಲು ಸಾಧ್ಯವಿಲ್ಲ. ಬದಲಾಗಿ ಹಿರಿದು - ಕಿರಿದು ಎಂಬ ಭೇದಭಾವವಿಲ್ಲದೆ ಇರುವಂತಹ ಹಿರಿತನ ಮಹಾದೇವಿಯಕ್ಕನಿಗಾಯಿತು ಎನ್ನುವ ಮೂಲಕ ಅಕ್ಕನ ಹಿರಿಮೆ ಎಲ್ಲರಿಗಿಂತಲೂ ಭಿನ್ನವಾದದ್ದು ಹಾಗೂ ಶ್ರೇಷ್ಠವಾದದ್ದು ಎಂಬುದನ್ನು ತಿಳಿಸಿದ್ದಾರೆ.

ಅಕ್ಕನ ಜೀವನ ಮಾತ್ರವಲ್ಲದೆ ಅವಳ ಸಾಹಿತ್ಯ ಸಾಧನೆ ಕೂಡ ಅಷ್ಟೇ ಶ್ರೇಷ್ಠವಾದದ್ದು. ಆಧುನಿಕ ಭಾವಗೀತೆಯ ಲಯ, ವಸ್ತು ಸ್ಥಿತಿಯನ್ನು ಹಿಡಿದಿಡುವ ಸಾಮರ್ಥ್ಯ ಅವಳ ವಚನಗಳಲ್ಲಿ ಬೇರೆ ವಚನಕಾರರಿಗಿಂತ ಹೆಚ್ಚಿನದಾಗಿರುವುದನು ಕಾಣಬಹುದು. ಚೆನ್ನಬಸವಣ್ಣ ಕೂಡ ಅವಳ ಸಾಹಿತ್ಯ ಸಾಧನೆಯ ವಿಶೇಷತೆಯನ್ನು ಅರಿತು ಈ ರೀತಿ ಹೇಳಿದ್ದಾನೆ.

**ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ**
**ಇಪ್ಪತ್ತು ವಚನ ದಣ್ಣಾಯಕರ ಇಪ್ಪತ್ತು ವಚನಕ್ಕೆ**
**ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತು ವಚನಕ್ಕೆ**
**ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ**
**ಕೂಡಲ ಚೆನ್ನ ಸಂಗಯ್ಯನಲ್ಲಿ ಮಹಾದೇವಿಯಕ್ಕಗಳ**
**ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ.** [೨೦]

ಎನ್ನುವ ಮೂಲಕ ಆದ್ಯರು, ದಣ್ಣಾಯಕರು, ಪ್ರಭುದೇವರು, ಅಜಗಣ್ಣ ಇವರೆಲ್ಲರ ವಚನಗಳಿಗಿಂತ ಅಕ್ಕನ ವಚನ ಹೆಚ್ಚು ಸಾಹಿತ್ಯಿಕ ಮೌಲ್ಯದಿಂದ ಕೂಡಿದ್ದುದ್ದಾಗಿದೆ ಎಂಬುದನ್ನು ತಿಳಿಸಿದ್ದಾರೆ.

ಮತ್ತೊಬ್ಬ ಮಹಾಜ್ಞಾನಿ ಸಿದ್ಧರಾಮ ಕೂಡ ಅಕ್ಕನ ಬಗೆಗೆ ಅಪಾರ ಗೌರವ ಭಾವನೆಯನ್ನು ಹೊಂದಿದ್ದವನು. ಅವನೂ ಕೂಡ ತನ್ನ ವಚನಗಳಲ್ಲಿ ಅಕ್ಕನ ಹಿರಿಮೆಯನ್ನು ಹೊಗಳಿದ್ದಾನೆ

**ಅಹುದಹುದು, ಮತ್ತೇನು ? ಮರಹಿಂಗೆ ಹಿರಿದು**
**ಕಿರಿದುಂಟಲ್ಲದೆ ಅರುಹಿಂಗೆ ಹಿರಿದು ಕಿರಿದುಂಟೆ**
**ಹೇಳಯ್ಯಾ? ಸಾವಿಂಗೆ ಭಯ ಉಂಟಲ್ಲದೆ**
**ಅಜಾತಂಗೆ ಭಯ ಉಂಟೆ ಹೇಳಯ್ಯಾ?**
**ಕಪಿಲಸಿದ್ಧ ಮಲ್ಲಿನಾಥಯ್ಯನಲ್ಲಿ**
**ಮಹಾದೇವಿಯಕ್ಕನ ನಿಲವಿಂಗೆ ಶರಣೆಂದು**
**ಶುದ್ಧನಾದೆನು ಕಾಣಾ ಚನ್ನಬಸವಣ್ಣಾ.** [೨೧]

ಎಂದು ಅರುಹುಳ್ಳವರಿಗೆ, ಅಜಾತರಿಗೆ ಯಾವುದೇ ಭಯವಿಲ್ಲ. ಮಹಾದೇವಿಯಕ್ಕನಿಗೆ ಹಿರಿದು ಕಿರಿದೆಂಬ ಭೇದವಾಗಲೀ, ಭಯದ ಅಂಜಿಕೆಯಾಗಲೀ ಇಲ್ಲ ಎಂದು ಅವಳ ನಿಲುವಿಗೆ ವಂದಿಸಿದ ಕಾರಣ ತಾನು ಶುದ್ಧನಾದೆನು ಎಂದು ಅವಳ ಹಿರಿಮೆಯನ್ನು ಮೆರೆದಿದ್ದಾನೆ. ಮತ್ತೊಬ್ಬ ವಚನಕಾರ ಮಡಿವಾಳ ಮಾಚಿದೇವ ಕೂಡ ಅಕ್ಕನ ದಿಗಂಬರತ್ವ ಹಾಗೂ ವ್ಯಕ್ತಿತ್ವ ಸಾಧನೆಯನ್ನು ತನ್ನ ವಚನದಲ್ಲಿ ಈ ರೀತಿ ಬಿಂಬಿಸಿದ್ದಾನೆ.

---

೨೦. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೧೦೨

೨೧. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮೂ.ನಂ.ನಂಜಪ್ಪ ಪುಟ - ೧೦೦

ಕಾಮಿಯಾಗಿ ನಿಃ ಕಾಮಿಯಾದಳು
ಸೀಮೆಯಲ್ಲಿರ್ದು ನಸ್ಸೀಮೆಯಾದಳು
ಭವಿಯ ಸಂಗವ ತೊರೆದು ಭಾವಬಾಧೆಯ ಹರಿದಳು
ಬಸವಣ್ಣ ಗತಿಯೆಂದು ಬರಲು
ನಾನು ಮಡಿಯ ಹಾಸಿ ನಡೆಸಿದೆ
ನಡೆವುದಕ್ಕೆ ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು
ಆ ಮಡಿಯ ಬೆಳಗಿನೊಳಗೆ ನಿರ್ವಯಲಾದಳು
ಕಲಿದೇವರ ದೇವಯ್ಯ ಮಹಾದೇವಿಯಕ್ಕಗಳ
ನಿಲವ ಬಸವಣ್ಣನ ಕೃಪೆಯಿಂದಲರಿದೆನಯ್ಯ ಪ್ರಭುವೆ. ೨೨

ಎಂದು ಕುಲಸೀಮೆಯಿಲ್ಲದ ಚೆನ್ನಮಲ್ಲಿಕಾರ್ಜುನನಿಗೆ ಸತಿಯಾಗುವ ಸಲುವಾಗಿ ಅಕ್ಕ ಕೂಡ ಅದೇ ಗುಣಗಳನ್ನು ತನ್ನಲ್ಲಿ ಮೈಗೂಡಿಸಿಕೊಂಡಳು. ವಸ್ತ್ರ ನಿರಾಕರಿಸಿ ದಿಗಂಬರೆಯಾದ ಅಕ್ಕ ತಾನು ನಡೆಯಲು ಹಾಸಿದ ಮಡಿಯನ್ನು ಸರ್ವಾಂಗಕ್ಕೆ ಹೊದೆಯುವುದರ ಮುಖಾಂತರ ಮಡಿವಾಳ ಮಾಚಿದೇವರು ಹಾಸಿದ ಮಡಿಗೆ ಗೌರವವನ್ನು ಸಲ್ಲಿಸುತ್ತಾಳೆ.

ಈ ರೀತಿ ತನ್ನ ಸಮಕಾಲೀನ ಸಮಾಜದೊಂದಿಗೆ ಅಕ್ಕ ತನ್ನನ್ನು ಸಮರ್ಪಕವಾಗಿ ಗುರುತಿಸಿಕೊಳ್ಳುತ್ತಾಳೆ. ಸ್ತ್ರೀಯ ಅಸ್ತಿತ್ವ ಸಂಪೂರ್ಣ ಪರಾಧೀನ ಎನ್ನುವ ಸಂದರ್ಭದಲ್ಲಿ ಅಕ್ಕ ತನ್ನದೇ ಆದ ಸ್ವತಂತ್ರ ವ್ಯಕ್ತಿತ್ವವೊಂದನ್ನು ರೂಪಿಸಿಕೊಂಡು ಅದನ್ನು ಸದಾ ಸಮರ್ಥಿಸುತ್ತಾ, ಗೌರವಿಸುತ್ತಾ, ಮುನ್ನಡೆಯುತ್ತಾಳೆ. ಅಲ್ಲದೆ ಗಂಡಿನಿಂದ ಗೌರವಿಸಿಕೊಳ್ಳಲು, ಆಧರಿಸಿಕೊಳ್ಳಲು ಸಾಧ್ಯವಿಲ್ಲದ ಸಂದರ್ಭದಲ್ಲಿ ಅಲ್ಲಮ, ಬಸವಣ್ಣ, ಚೆನ್ನಬಸವಣ್ಣನಂತಹ ಪುರುಷ ಶ್ರೇಷ್ಠರ ಗೌರವಾಧಾರಗಳಿಗೆ ಒಳಗಾಗುವ ಮುಖಾಂತರ ಪುರುಷ ಪ್ರಧಾನ ವ್ಯವಸ್ಥೆಯ ಅಸ್ತಿತ್ವವನ್ನು ಬುಡಮೇಲು ಮಾಡಿದ್ದಾಳೆ. ಅಲ್ಲದೆ ಹೆಣ್ಣು ಕೂಡ ಗಂಡಿನ ಸರಿಸಮಾನವಾಗಿ ನಿಂತು ಆಧ್ಯಾತ್ಮ, ಲೌಕಿಕ, ತಾತ್ವಿಕ ವಿಷಯಗಳಿಗೆ ಸಂಬಂಧಿಸಿದಂತೆ ಮುಕ್ತ ಚರ್ಚೆ ಮಾಡಬಹುದು ಎಂಬುದನ್ನು ಅಲ್ಲಮ ಪ್ರಭು ಮತ್ತು ಕಿನ್ನರಿ ಬೊಮ್ಮಯ್ಯರೊಂದಿಗಿನ ಚರ್ಚೆಯ ಸಂದರ್ಭದಲ್ಲಿ ಸಾಬೀತು ಪಡಿಸಿದ್ದಾಳೆ. ಇಲ್ಲಿ ಗಮನಿಸಬಹುದಾದ ಮತ್ತೊಂದು ಪ್ರಮುಖ ಸಂಗತಿಯೆಂದರೆ ಅನುಭವ ಮಂಟಪದಲ್ಲಿ ವಚನಕಾರರೆಲ್ಲರಿಂದ ಮನ್ನಣೆಗೆ ಪಾತ್ರಳಾದ ಅಕ್ಕನ ಬಗೆಗೆ ವಚನಕಾರ್ತಿಯರು ಯಾವುದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸದೇ ಇರುವುದು ಸೋಜಿಗದ ಸಂಗತಿ. ಅಕ್ಕನ ವ್ಯಕ್ತಿತ್ವದ ಬಗೆಗೆ ವಚನಕಾರ್ತಿಯರ ಸಮ್ಮತವಿತ್ತೇ ಅಥವಾ ವಿರೋಧವಿತ್ತೇ ಎಂಬ ಅಂಶ ಸ್ಪಷ್ಟವಾಗುವುದಿಲ್ಲ. ಏನೇ ಆದರೂ ಕೂಡ ಅಕ್ಕ ತನ್ನ ನಿಲುವನ್ನು ಸದಾ ಸಮರ್ಥಿಸಿಕೊಳ್ಳುತ್ತಾ ವಚನಕಾರರೆಲ್ಲರ ಮೆಚ್ಚುಗೆಗೆ ಪಾತ್ರಳಾಗುತ್ತಾಳೆ. ಒಟ್ಟಾರೆ ಅಕ್ಕನನ್ನು ಒಳಗೊಂಡಂತೆ ಸಮಕಾಲೀನ ವಚನಕಾರರೆಲ್ಲರೂ ಅಂದಿನ ಸಮಾಜದಲ್ಲಿ ರೂಢಿಯಲ್ಲಿದ್ದ ಎಷ್ಟೋ ಮಾನವೀಯ ಸಂಬಂಧ - ಸಂಪ್ರಾದಯಗಳ ವಿರುದ್ಧ ಪ್ರತಿಭಟನೆಯನ್ನು ಆರಂಭಿಸಿದರು ಎಂದರೆ ತಪ್ಪಾಗಲಾರದು.

---

೨೨. ತತ್ವ ಶಿಖಾಮಣಿ ಅಕ್ಕಮಹಾದೇವಿ, ಕಲ್ಯಾಣ ಸಾಹಿತ್ಯ ಭಂಡಾರ, ಮಾ.ನಂ.ನಂಜಪ್ಪ ಪುಟ - ೧೦೨

# ಉಪಸಂಹಾರ

ಅಕ್ಕನ ವಚನಗಳು ಕೇವಲ ಆಧ್ಯಾತ್ಮಿಕ ವ್ಯಾಪ್ತಿಗೆ ಮಾತ್ರ ಒಳಪಡದೆ ಸಾಮಾಜಿಕ, ಸಾಂಸ್ಕೃತಿಕ ಹಾಗೂ ವ್ಯಕ್ತಿಯ ವೈಯಕ್ತಿಕ ಮೌಲ್ಯಗಳನ್ನು ಪ್ರತಿಬಿಂಬಿಸುವ ಉತ್ತಮ ಸಾಹಿತ್ಯ ಕೋಶ ಎಂಬುದು ಅವಳ ವಚನಗಳ ಅಧ್ಯಯನದಿಂದ ತಿಳಿದು ಬರುತ್ತದೆ.

ಅಕ್ಕನ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ವಿಭಿನ್ನ ಸ್ವರೂಪವನ್ನು ಅರಿಯುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಉದ್ದೇಶ ಸಾಧ್ಯವಾದಷ್ಟು ಮಟ್ಟಿಗೆ ಈಡೇರಿದೆ ಎನಿಸುತ್ತದೆ. ಉದ್ದೇಶ ಮತ್ತು ವ್ಯಾಪ್ತಿಯಲ್ಲಿ ತಿಳಿಸಿರುವಂತೆ ಮೊದಲಿಗೆ ವಚನಗಳ ಜೊತೆಗೆ ಅವಳ ಇತರೆ ರಚನೆ ಹಾಗೂ ಅವಳ ಜೀವನ ಚರಿತ್ರೆಗಳ ಅಧ್ಯಯನಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿತ್ತು. ಆದರೆ ನಂತರದ ಹಂತದಲ್ಲಿ ಕೇವಲ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆಯ ಸ್ವರೂಪವನ್ನು ಕೇಂದ್ರವಾಗಿಸಿಕೊಂಡು ಉಳಿದವುಗಳನ್ನು ನಿರ್ಲಕ್ಷಿಸಲಾಗಿದೆ. ಇದಕ್ಕೆ ಕಾರಣವೇನೆಂದರೆ ಅಕ್ಕನ ಜೀವನ ಚರಿತ್ರೆಗೆ ಸಂಬಂಧಿಸಿದ ವಿಷಯಗಳು ಆಧ್ಯಾತ್ಮದ ಮೂಸೆಯಲ್ಲಿ ರೂಪುಗೊಂಡಿದ್ದವಾದ್ದರಿಂದ ವಾಸ್ತವಕ್ಕಿಂತ ಅತಿಶಯ ವರ್ಣನೆಗಳು ಹೆಚ್ಚು ಬರುವ ಸಂಭವ ಉಂಟು. ಆದುದರಿಂದ ವಚನಗಳನ್ನು ಪ್ರಮುಖ ಕೇಂದ್ರವಾಗಿಸಿಕೊಂಡು ಈ ನಿಬಂಧ ರಚಿಸಲಾಗಿದೆ.

ಆರಂಭದಲ್ಲಿ ಬರುವ ವಚನ ಸಾಹಿತ್ಯದಲ್ಲಿ ಪ್ರತಿಭಟನೆಯ ಕಲ್ಪನೆಗಳು ವಿಷಯವನ್ನು ಕಡೆಯಲ್ಲಿ ರಚಿಸಲು ತೀರ್ಮಾನಿಸಿದ ಕಾರಣ ಸಂಪೂರ್ಣ ವಚನ ಸಾಹಿತ್ಯದಲ್ಲಿ ಬರುವ ಪ್ರತಿಭಟನೆಯ ಸ್ವರೂಪವನ್ನು ಸಮಗ್ರವಾಗಿ ಅಧ್ಯಯನ ಮಾಡಲು ಸಾಧ್ಯವಾಗಿಲ್ಲ. ಕೇವಲ ಪ್ರಾತಿನಿಧಿಕ ವಚನಕಾರರ ವಚನಗಳ ವಿಶ್ಲೇಷಣೆಯ ಮೂಲಕ ಈ ವಿಷಯವನ್ನು ಕುರಿತು ಚರ್ಚಿಸಲಾಗಿದೆ.

ಅಕ್ಕನ ವಚನಗಳಲ್ಲೇ ನೇರವಾದ ಪ್ರತಿಭಟನೆಯನ್ನು ಕಾಣುವುದು ಕಡಿಮೆಯಾದರೂ ಕೂಡ ಅವಳ ವಚನಗಳಲ್ಲಿ ವ್ಯಕ್ತವಾಗುವ ನಿರಾಕರಣಾ ಪ್ರಕ್ರಿಯೆ ಕೂಡ ಪ್ರತಿಭಟನೆಯ ಒಂದು ಮುಖ ಎಂದು ಭಾವಿಸಲಾಗಿದೆ. ಈ ಹಿನ್ನೆಲೆಯಲ್ಲಿ ಅಕ್ಕನ ಸಂಸಾರ ನಿರಾಕರಣೆ, ಲೌಕಿಕ ಗಂಡನ ನಿರಾಕರಣೆ, ಸಿದ್ಧ ಮಾದರಿಗಳ ನಿರಾಕರಣೆಯನ್ನು ಕುರಿತಂತೆ ವ್ಯಾಪಕವಾಗಿ ಚರ್ಚಿಸಲಾಗಿದೆ. ಜೊತೆಗೆ ಅಕ್ಕ ರೂಪಕಗಳ ಮೂಲಕ ಸಂಸಾರದ ಸಂಬಂಧಗಳನ್ನು ನಿರಾಕರಣೆಗೆ ಒಳಪಡಿಸಿದ ಬಗೆಯನ್ನು ಕುರಿತೂ ಕೂಡ ವಿಶ್ಲೇಷಿಸಲಾಗಿದೆ. ಅಕ್ಕ ಲೌಕಿಕ ಸಿದ್ಧ ನಂಬಿಕೆಗಳ ವಿರುದ್ಧ ಸಿಡಿದೆದ್ದ ಕ್ರಮ ಅತ್ಯಂತ ಪ್ರಮುಖವಾದದ್ದು. ಈ ಹಿನ್ನೆಲೆಯಲ್ಲಿ ಸಿದ್ಧ ಮಾದರಿಗಳ ನಿರಾಕರಣೆಯ ಕ್ರಮವನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಆದರೆ ಅದರ ವ್ಯಾಪ್ತಿಯನ್ನು ಇನ್ನಷ್ಟು ವಿಸ್ತರಿಸಿ, ವಿಶ್ಲೇಷಿಸಿ ನೋಡುವ ಅವಶ್ಯಕತೆಯಿತ್ತು ಎಂದೆನಿಸುತ್ತದೆ.

ಅಕ್ಕನ ಸಮಾಕಾಲೀನ ವಚನಕಾರ್ತಿಯರ ವಚನಗಳಲ್ಲಿ ಕಂಡು ಬರುವ ಪ್ರತಿಭಟನೆಯ ಸ್ವರೂಪವನ್ನು ಒಂದು ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಇಲ್ಲಿ ಕೆಲವು ಅಂಶಗಳನ್ನು ಮಾತ್ರ ಆರಿಸಿಕೊಂಡು, ಅದರ ಬಗೆಗೆ ವಚನಕಾರ್ತಿಯರು ಪ್ರತಿಕ್ರಿಯಿಸಿದ ಬಗೆಯನ್ನು ಕುರಿತು ಚರ್ಚಿಸಲಾಗಿದೆ. ಆಚರಣೆ, ನೇಮ, ಕಾಯಕ, ಈ ರೀತಿಯ ಸಾಂಪ್ರದಾಯಿಕ ಕಟ್ಟಿಗೆ ಒಳಪಟ್ಟ ವಿಷಯಗಳನ್ನು ಆಧಾರವಾಗಿಟ್ಟುಕೊಂಡು ಅದರ ಬಗೆಗೆ ವಚನಕಾರ್ತಿಯರು ಕಟ್ಟಿಕೊಡುವ ಕಲ್ಪನೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಇಲ್ಲಿ ವಚನಕಾರ್ತಿಯರ ಸೀಮಿತ ವಚನಗಳನ್ನು ನನ್ನ ಪರಿಮಿತಿಯಲ್ಲಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ವಿಶ್ವದ ವಿವಿಧ ಭಾಗಗಳಲ್ಲಿ ಕಂಡುಬರುವ ಸಂತ ಮಹಿಳೆಯರ ಜೀವನ ಮತ್ತು ಸಾಧನೆಯನ್ನು ಅಕ್ಕನ ಜೀವನ ಮತ್ತು ಸಾಧನೆಯೊಂದಿಗೆ ಹೋಲಿಸಿ ವಿಶ್ಲೇಷಿಸುವ ಸಲುವಾಗಿ ಅಧ್ಯಯನ ಮಾಡಲಾಗಿದೆ. ಇಲ್ಲಿ ಎಲ್ಲಾ ಸಂತ ಮಹಿಳೆಯರ ಸಂಪೂರ್ಣ ಜೀವನ ಚರಿತ್ರೆ ದೊರೆಯದ ಕಾರಣ ಆಂಶಿಕ ಭಾಗಗಳನ್ನು ಅಧ್ಯಯನ ಮಾಡಿ ಈ ನಿಬಂಧವನ್ನು ರಚಿಸಲಾಗಿದೆ. ಅಲ್ಲದೆ ಅವರ ಸಾಹಿತ್ಯ ರಚನೆಯ ಕೆಲವು ಅಂಶಗಳನ್ನು ಆಯ್ದು ಅದರಲ್ಲಿ ಕಂಡುಬರುವ ಪ್ರತಿಭಟನೆಯ ಅಂಶಗಳನ್ನು ಮಾತ್ರ ಗುರುತಿಸಲಾಗಿದೆ.

ಕಡೆಯ ಅಧ್ಯಾಯದಲ್ಲಿ ಅಕ್ಕ ವಚನಕಾರರಿಗೆ ಎದುರಾದ ಬಗೆಯನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಈ ಅಧ್ಯಾಯದಲ್ಲಿ ಅಕ್ಕ ಅನುಭವ ಮಂಟಪಕ್ಕೆ ಬಂದು ಅಲ್ಲಿನ ಶರಣರೊಂದಿಗೆ ಚರ್ಚೆಗೆ ಒಳಗಾದ ಪರಿಯನ್ನು ಕುರಿತು ಚಿಂತಿಸಲಾಗಿದೆ. ಅಲ್ಲಮ, ಬಸವಣ್ಣ ಕಿನ್ನರಿ ಬೊಮ್ಮಯ್ಯರೊಂದಿಗಿನ ಚರ್ಚೆಯ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಜೊತೆಗೆ ಅಕ್ಕನ ಬಗೆಗೆ ಈ ವಚನಕಾರರ ಅಭಿಪ್ರಾಯವನ್ನೂ ಉಲ್ಲೇಖಿಸಲಾಗಿದೆ.

ಅಕ್ಕನ ವಚನಗಳಲ್ಲಿ ಕಂಡುಬರುವ ಪ್ರತಿಭಟನೆಯ ವಿವಿಧ ಮಾದರಿಗಳನ್ನು ಹುಡುಕುವ ಸಲುವಾಗಿ ಅಧ್ಯಯನವನ್ನು ಕೈಗೊಂಡಿತಾದರೂಅದನ್ನು ಇತರೆ ವಚನ ಕಾರ್ತಿಯರು ಹಾಗೂ ಸಂತ ಮಹಿಳೆಯರ ಪ್ರತಿಭಟನೆಯ ವ್ಯಾಪ್ತಿಗೆ ವಿಸ್ತರಿಸಲಾಗಿದೆ. ಮೊದಲೇ ತಿಳಿಸಿದಂತೆ ಅಕ್ಕನ ವಚನಗಳಲ್ಲಿ ವ್ಯಕ್ತವಾಗುವ ಪ್ರತಿಭಟನೆ ಕೇವಲ ವೈಯಕ್ತಿಕವಾಗಿರದೆ, ವಿಶಾಲ ವಾಪ್ತಿಯನ್ನು ಒಳಗೊಂಡಿರುವುದರಿಂದ ಈ ವಚನಗಳ ಅಧ್ಯಯನ ಇಂದಿಗೂ ಪ್ರಸ್ತುತ ಎಂದೆನಿಸುತ್ತದೆ. ಆಧುನಿಕ ಸ್ತ್ರೀವಾದಿ ಚಿಂತನೆ ಹಾಗೂ ಆಲೋಚನೆಯನ್ನು ಪ್ರಪ್ರಥಮ ಬಾರಿಗೆ ಅಕ್ಕನ ವಚನಗಳಲ್ಲಿ ಗುರುತಿಸಬಹುದಾಗಿದೆ.

# ಪಾರಾಮರ್ಶನ ಗ್ರಂಥಗಳು


ಶಿವಶರಣೆಯರ ವಚನ ಸಂಪುಟ ಭಾಗ - 5 - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

ಬಸವಣ್ಣನವರ ವಚನ ಸಂಪುಟ ಭಾಗ - 5 - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

ಚನ್ನಬಸವಣ್ಣನವರ ವಚನ ಸಂಪುಟ ಭಾಗ - 3 - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಪ್ರಕಟಣೆ

ವಚನಗಳಲ್ಲಿ ಪ್ರತಿಮೆಗಳು - ಶ್ರೀಮತಿ ಉಷಾಕಿರಣ್

ಅಕ್ಕನ ವಚನಗಳು - ಸಂ. ಡಾ.ಎಲ್.ಬಸವರಾಜು

ಅಕ್ಕಮಹಾದೇವಿ - ಶ್ರೀಮತಿ ಬಿ.ಎನ್.ಸುಮಿತ್ರಾಬಾಯಿ

ಮಹಾದೇವಿ - ಡಾ॥ಸಿದ್ಧಯ್ಯ ಪುರಾಣಿಕ

ತತ್ವಶಿಖಾಮಣಿ ಮಹಾದೇವಿ ಅಕ್ಕ - ಮಾ.ನ.ನಂಜಪ್ಪ

ವಚನಕಾರರು ಮತ್ತು ಶಬ್ದಕಲ್ಪ - ಅ.ರಾ.ಮಿತ್ರ

ವಚನ ಕಮ್ಮಟ - ಕೆ.ಮರಳುಸಿದ್ದಪ್ಪ ಕಿ.ರಂ.ನಾಗರಾಜು

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ - ಮೈಸೂರು ವಿ.ವಿ. ಪ್ರಕಟಣೆ

ಶರಣರ ಅನುಭಾವ ಸಾಹಿತ್ಯ - ಡಾ॥ ಎಚ್.ತಿಪ್ಪೇರುದ್ರಸ್ವಾಮಿ

ಹರಿಹರನ ರಗಳೆಗಳ ಸಾಹಿತ್ಯಿಕ ಅಧ್ಯಯನ - ಡಾ.ಕೆ.ಪಿ.ಮಹಾದೇವಯ್ಯ

ಮೀರಾಬಾಯಿ - ಟಿ.ಜಿ.ಪ್ರಭಾಶಂಕರ

ವಚನಗಳಲ್ಲಿ ಸಮಾಜವಾದ - ದೇ.ಜವರೇಗೌಡ

ಅಕ್ಕಮಹಾದೇವಿ - ಗುರುಲಿಂಗ ಕಾಪಸೆ

ಶೂನ್ಯ ಸಂಪಾದನೆ ಒಂದು ಅಧ್ಯಯನ - ಡಾ.ಸಾ.ಶಿ.ಮರುಳಯ್ಯ

ಅಕ್ಕಮಹಾದೇವಿಯ ವಚನಗಳಲ್ಲಿ
ಪ್ರತಿಭಟನೆ ಮತ್ತು ಅನುಭಾವ - ಡಾ.ವಿಜಯಾ ಸುಬ್ಬರಾಜ್

ಅನುಭಾವ ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ - ಡಾ.ಬಸವರಾಜ ಕಲ್ಗುಡಿ

ವಿಶ್ವದ ಸಂತ ಮಹಿಳೆಯರು - ಬಿ.ನಂ.ಚಂದ್ರಯ್ಯ

ಧರ್ಮ, ಮಹಿಳೆ ಮತ್ತು ಸಮಾಜ - ಶಾಂತ ಇಮ್ರಾಪುರ

ಆಂಡಾಳ್ ಮಹಾದೇವಿ ಮೀರಾ - ಡಾ.ಎಸ್. ವಿನೋದಾಬಾಯಿ

ಕದಳಿ ಕರ್ಪೂರ - ಡಾ.ಎಚ್.ತಿಪ್ಪೇರುದ್ರಸ್ವಾಮಿ

ಗಿರಿಯ ನವಿಲು - ಬಸವರಾಜ ಕಟ್ಟೀಮನಿ

